# ಪೂರ್ಣಚಂದ್ರ ತೇಜಸ್ವಿಯವರ ಕಾದಂಬರಿಗಳು

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್ [illegible] ಪದವಿಗಾಗಿ
ಸಲ್ಲಿಸಿದ ಕಿರುಪ್ರಬಂಧ


ಸಂಶೋಧಕ
ಕೆ.ಪಿ.ನಾಗರಾಜ

ಮಾರ್ಗದರ್ಶಕರು
ಡಾ.ರಹಮತ್ ತರೀಕೆರೆ





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ೫೮೩ ೨೭೬


ಏಪ್ರಿಲ್ ೨೦೦೫

# ಕುಸುಮಾಕರ ದೇವರಗೆಣ್ಣೂರರ ಕಾದಂಬರಿಗಳು

(ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕ

ಕೆ.ಪಿ.ನಾಗರಾಜ

ಮಾರ್ಗದರ್ಶಕರು

ಡಾ.ರಹಮತ್ ತರೀಕೆರೆ





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಏಪ್ರಿಲ್ ೨೦೦೫




104

## ಪ್ರಮಾಣ ಪತ್ರ

ಕುಸುಮಾಕರ ದೇವರಗೆಣ್ಣೂರರ ಕಾದಂಬರಿಗಳು ಎಂಬ ನಿಬಂಧವನ್ನು ಡಾ.ರಹಮತ್ ತರೀಕೆರೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

[signature]

ಕೆ.ಪಿ.ನಾಗರಾಜ
ಎಂ.ಫಿಲ್.ವಿದ್ಯಾರ್ಥಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೩೦.೦೪.೨೦೦೫

# ಮಾರ್ಗದರ್ಶಕರ ಪ್ರಮಾಣಪತ್ರ

ಕುಸುಮಾಕರ ದೇವರಗೆಣ್ಣೂರರ ಕಾದಂಬರಿಗಳು ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಕೆ.ಪಿ.ನಾಗರಾಜ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೩೦.೦೪.೨೦೦೫

ಡಾ. ರಹಮತ್ ತರೀಕೆರೆ
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

೧

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ಅಧ್ಯಯನ ವಿಧಾನ

## ಪೀಠಿಕೆ

ಕಾಲಗರ್ಭದಲ್ಲಿ ಅನೇಕ ಲೇಖಕರ ಕೃತಿಗಳು ಕಣ್ಮರೆಯಾಗಿರುವುದನ್ನು ನಾವು ಸಾಹಿತ್ಯ ಚರಿತ್ರೆಯಲ್ಲಿ ಕಾಣುತ್ತೇವೆ. ಮತ್ತೆ ಕೆಲವು ಕೃತಿಗಳು ಲೇಖಕರ ಜೀವತಾವಧಿಯಲ್ಲಿ ಪ್ರಾಮುಖ್ಯತೆ ಪಡೆಯದೆ ಅವಜ್ಞೆಗೆ ಒಳಗಾಗಿದ್ದು, ನಂತರದ ವರ್ಷಗಳಲ್ಲಿ ಉತ್ತಮ ಕೃತಿಗಳೆಂಬ ಹೆಗ್ಗಳಿಕೆಗೆ ಪಾತ್ರವಾಗಿವೆ. ಮತ್ತೆ ಕೆಲವು ಕೃತಿಗಳು ಲೇಖಕರ ಜೀವಿತಾವಧಿಯಲ್ಲಿ ಶ್ರೇಷ್ಠ ಕೃತಿಗಳೆನಿಸಿಕೊಂಡರೂ ಆನಂತರದ ದಿನಗಳಲ್ಲಿ ಕನಿಷ್ಟ ಮಟ್ಟಕ್ಕಿಳಿದಿವೆ. ಈ ವ್ಯತ್ಯಾಸಗಳಿಗೆ ಪ್ರಮುಖ ಕಾರಣ, ಓದುಗ ಲೋಕದ ಅಭಿರುಚಿ, ಚಿಂತನಾಕ್ರಮಗಳಲ್ಲಿ ಆಗುವ ಬದಲಾವಣೆ ಎಂದು ಹೇಳಬಹುದು. ಜನರಲ್ಲಿ ಈ ಬದಲಾವಣೆಗಳಾದಂತೆ ಸಾಹಿತ್ಯಕೃತಿಗಳ ಸ್ಥಾನ ಮಾನದಲ್ಲಿಯೂ ಏರಿಳಿತಗಳಾಗುತ್ತವೆ.

## ಉದ್ದೇಶ

ಪ್ರಸ್ತುತ ಅಧ್ಯಯನಕ್ಕೆ ಆರಿಸಿಕೊಂಡಿರುವ ಕುಸುಮಾಕರ ದೇವರಗೆಣ್ಣೂರು ಅಂತಹ ಏರಿಳಿತಗಳಿಗೆ ಈಡಾದ ಲೇಖಕರು. ಅರವತ್ತರ ದಶಕದ ಕಾಲದಿಂದಲೂ ಇಂದಿನವರೆಗೂ ಇವರ ಬರವಣಿಗೆಯು ಸತತ ಸಾಗುತ್ತಲೇ ಬಂದಿದೆ. ಸುಮಾರು ೧೯೬೦ರ ದಶಕದಲ್ಲಿ ಪ್ರಥಮ ಕವನ ಸಂಕಲನ 'ಸ್ವಪ್ನನೌಕೆ'ಯೊಂದಿಗೆ ಇವರ ಸಾಹಿತ್ಯಕೃಷಿ ಆರಂಭವಾಯಿತು. ನಂತರದ ದಿನಗಳಲ್ಲಿ 'ಮುಗಿಯದ ಕತೆ'ಯಿಂದ ಹಿಡಿದು ಇತ್ತೀಚಿನ 'ಬಯಲು-ಬಸಿರು'(೨೦೦೪) ಕಾದಂಬರಿಯವರೆಗೂ ಕೆಲವು ಕಾದಂಬರಿಗಳು ಪ್ರಕಟವಾಗಿವೆ. ೧೯೬೫ರಿಂದ ೨೦೦೪ರ ಅವಧಿಯಲ್ಲಿ ಅವರು ರಚಿಸಿರುವ ಕಾದಂಬರಿಗಳು ಕೇವಲ ಐದು. ಅತಿ ಧೀರ್ಘಾವಧಿಯಲ್ಲಿ ಕಡಿಮೆ ಕೃತಿಗಳನ್ನು ಬರೆದಿರುವವರಲ್ಲಿ ದೇವನೂರ ಮಹಾದೇವನನ್ನು ಬಿಟ್ಟರೆ ಬಹುಶಃ ಕುಸುಮಾಕರರೇ ಎರಡನೆಯವರಾಗಬಹುದು. ಈ ರೀತಿಯ ಬರವಣಿಗೆಯಲ್ಲಿನ ನಿಧಾನಪ್ರವೃತ್ತಿಗೆ ಏನು ಕಾರಣ ತಿಳಿಯುವುದಿಲ್ಲ? ಕುಸುಮಾಕರರ ಪ್ರಥಮ ಕೃತಿ ಕವನ-ಸಂಕಲನವಾದರೂ, ಆ ನಂತರದ ದಿನಗಳಲ್ಲಿ ಅವರು ಕಾದಂಬರಿಯನ್ನು ತಮ್ಮ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಆಯ್ಕೆ ಮಾಡಿಕೊಂಡರು. ಕುಸುಮಾಕರರಿಗೆ ತಮ್ಮ ಅಭಿವ್ಯಕ್ತಿಗೆ ಸೂಕ್ತ ಮಾಧ್ಯಮ ಕವನಕ್ಕಿಂತಲೂ ಕಾದಂಬರಿಯಾಗಿ ಕಂಡಿತು. ಈಚಿನ ಕಾದಂಬರಿ ನೋಡಿದರೆ ಸುಮಾರು ಐವತ್ತು ವರ್ಷಗಳ ಬರವಣಿಗೆಯ ನಡುವೆಯೂ ಇನ್ನು ಬರವಣಿಗೆಯ ಸ್ಫೂರ್ತಿಯು ಮಾಸಿಲ್ಲ. ಮತ್ತೆ ಇವರ ಕೆಲವು ಕೃತಿಗಳು ಹೊರಬರುವ ಸಾಧ್ಯತೆಯಿದೆ.

ಕುಸುಮಾಕರರ ಐದು ದಶಕಗಳ ಬರವಣಿಗೆಯಲ್ಲಿ ಒಂದು ಕವನ ಸಂಕಲನ, ಐದು ಕಾದಂಬರಿಗಳು ಹೊರಬಂದರೂ ಅವು ಕನ್ನಡ ಸಾಹಿತ್ಯದ ಚರ್ಚೆಯಲ್ಲಿ ಅಷ್ಟಾಗಿ ಕಾಣಿಸುವುದಿಲ್ಲ. ಶಾಂತಿನಾಥ ದೇಸಾಯಿಯವರು 'ನಾಲ್ಕನೆಯ ಆಯಾಮ'ದ ಬಗ್ಗೆ, ಮತ್ತು ಸಿ.ಎನ್ .ರಾಮಚಂದ್ರನ್‌ರವರು ಇವರ ಸಮಗ್ರ ಸಾಹಿತ್ಯದ ಬಗ್ಗೆ, ಇತ್ತೀಚೆಗೆ(೨೦೦೫, ಏಪ್ರಿಲ್) ಡಾ.ರಹಮತ್ ತರೀಕೆರೆಯವರ 'ಜಾಗತೀಕರಣಕ್ಕೆ ಪ್ರತಿಕ್ರಿಯೆಯಾಗಿ?' ಎಂಬ ಶೀರ್ಷಿಕೆಯಡಿಯಲ್ಲಿ ಕುಸುಮಾಕರರ ಕಾದಂಬರಿಗಳ ಬಗ್ಗೆ ಲೇಖನ 'ಮಯೂರ' ಮಾಸಪತ್ರಿಕೆಯಲ್ಲಿ ಬಂದಿದೆ. ಇಷ್ಟನ್ನು ಹೊರತು-ಪಡಿಸಿದರೆ ಬೇರೆ ಯಾವುದೇ ವಿಮರ್ಶಕರ ವಿಮರ್ಶೆಯು ಇವರ ಕೃತಿಗಳನ್ನು ಕುರಿತು ನಡೆದಿರುವುದು ಕಾಣುವುದಿಲ್ಲ. ಆದರೆ ಒಟ್ಟು ನವ್ಯ ಸಾಹಿತ್ಯದ ಚರ್ಚೆಯು ಬಂದಾಗ ಪ್ರಾಸಂಗಿಕ ಉಲ್ಲೇಖಗಳು ಮಾತ್ರ ಬರುತ್ತವೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನಕ್ಕಾಗಿ ಕುಸುಮಾಕರರ ಕಾದಂಬರಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಬಹುಶಃ ಕುಸುಮಾಕರರು ಕರ್ನಾಟಕದಿಂದ ದೂರದ ಮಹಾರಾಷ್ಟ್ರದಲ್ಲಿಯ ಸೊಲ್ಲಾಪುರದಲ್ಲಿ ವಾಸವಾಗಿರುವುದು ಇವರ ಕೃತಿಗಳ ಕಡಿಮೆ ಚರ್ಚೆಗೆ ಕಾರಣ. ಕರ್ನಾಟಕದಿಂದ ಹೊರಗಿದ್ದು, ಬೇರೆ ಭಾಷೆಗಳನ್ನಾಡುವ ಜನರ ಮಧ್ಯೆ ವಾಸವಾಗಿದ್ದು, ಕನ್ನಡ ಭಾಷೆಯಲ್ಲಿ ಬರೆಯುತ್ತಿರುವ ಕೆಲವೇ ಸಾಹಿತಿಗಳ ಸಾಲಿಗೆ ಕುಸುಮಾಕರರನ್ನು ಸೇರಿಸಬಹುದು. ಯಶವಂತ ಚಿತ್ತಾಲ, ವ್ಯಾಸರಾಯ ಬಲ್ಲಾಳರ ಸಾಲಿನಲ್ಲಿ ಕುಸುಮಾಕರರು ಬರುತ್ತಾರೆ. ಈ ಅಂಶವು ಇವರ ಕಾದಂಬರಿಗಳ ಪ್ರಸ್ತುತ ಅಧ್ಯಯನಕ್ಕೆ ಪ್ರೇರಣೆಯನ್ನು ನೀಡಿತು. ಕುಸುಮಾಕರರ ಬರವಣಿಗೆಯಲ್ಲಿ ಒಂದು ಕೃತಿ ಮತ್ತು ಮತ್ತೊಂದು ಕೃತಿಯು ಹೊರಬರುವಲ್ಲಿ ಸಾಕಷ್ಟು ಕಾಲದ ಅಂತರವಿದೆ. ಈ ಕಾಲದ ಅಂತರದ ಕಾರಣದಿಂದ ಒಂದು ಕೃತಿಯು ಮತ್ತೊಂದಕ್ಕಿಂತ ವಿಶಿಷ್ಟ ರೂಪವನ್ನು ಪಡೆದಿದೆ. ಜೊತೆಗೆ ಈ ಕಾಲಾವಧಿಯಲ್ಲಿ ಸಾಹಿತ್ಯದಲ್ಲಿ ಸಾಕಷ್ಟು ಸ್ಥಿತ್ಯಂತರಗಳು ಸಂಭವಿಸಿವೆ. ಹೊಸ ಹೊಸ ಸಾಹಿತ್ಯ ಪಂಥಗಳು ಪ್ರಾಮುಖ್ಯತೆಗೆ ಬಂದಿವೆ.

ಮೇಲಿನ ಕಾರಣಗಳಿಂದ ಕುಸುಮಾಕರರ ಕಾದಂಬರಿಗಳನ್ನು ಪ್ರಸ್ತುತ ನಿಬಂಧದಲ್ಲಿ ಅಧ್ಯಯನದ ವಿಷಯವನ್ನಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

## ಅಧ್ಯಯನದ ಮಹತ್ವ

ಕುಸುಮಾಕರರ ದೇವರ-ಗೆಣ್ಣೂರರವರು ನವ್ಯದ ಬರಹಗಾರರು. ೧೯೬೫ರಿಂದ ನವ್ಯ ಸಾಹಿತ್ಯವು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುವ ಹಂತದವರೆಗೂ ಅವರ ಬರವಣಿಗೆ ಸಾಗಿದೆ. ಪಾಶ್ಚಾತ್ಯ ಸಾಹಿತ್ಯ ಚಿಂತನೆಗಳ ಪ್ರೇರಣೆಯಿಂದಲೂ, ಕರ್ನಾಟಕ ಭಾರತದಲ್ಲಾದ ಜೀವನಪಲ್ಲಟ, ಕೆಲವು ಚಾರಿತ್ರಿಕ ಬದಲಾವಣೆಗಳು, ಅಸ್ತಿತ್ವವಾದ, ಅಸಂಗತವಾದ, ಆಧುನಿಕ ಮನಃಶಾಸ್ತ್ರೀಯ ಸಿದ್ಧಾಂತಗಳ ಹಿನ್ನೆಲೆ ನವ್ಯ ಸಾಹಿತ್ಯಕ್ಕೆ ಇತ್ತು. ಯು.ಆರ್.ಅನಂತಮೂರ್ತಿ, ಕೆ.ಪಿ.ಪೂರ್ಣಚಂದ್ರ ತೇಜಸ್ವಿ, ಶಾಂತಿನಾಥ ದೇಸಾಯಿ, ಪಿ.ಲಂಕೇಶ್ ಇವರ ಮೇಲೆ ಅಸ್ತಿತ್ವವಾದದ ಪ್ರಭಾವವಿದೆ. ಮನುಷ್ಯನ ಮೂಲಭೂತ ಸಹಜ ಪ್ರವೃತ್ತಿಯಾದ ಕಾಮವು ಎಲ್ಲಾ

ನವ್ಯದ ಬರಹಗಾರರಲ್ಲಿಯೂ ಪ್ರಮುಖವಾಗಿ ಕಂಡುಬರುವ ಅಂಶ. ನವ್ಯವು ಸಾಮಾನ್ಯವಾಗಿ ತಾತ್ವಿಕ ದೃಷ್ಟಿಕೋನ ಹೊಂದಿರುವ ವ್ಯಕ್ತಿಕೇಂದ್ರಿತ ದರ್ಶನವಾಗಿದೆ. ವ್ಯಕ್ತಿಯ ನಡವಳಿಕೆ, ಅವನ ಮಾನಸಿಕ ತುಡಿತಗಳನ್ನು ನವ್ಯ ಸಾಹಿತ್ಯದಲ್ಲಿ ಪ್ರಧಾನವಾಗಿ ಚಿತ್ರಿಸಲಾಗಿದೆ. ನವ್ಯದ ಬಹುತೇಕ ಬರಹಗಾರರು ತಮ್ಮ ಚಿಂತನೆಯನ್ನು ಪ್ರಾರಂಭದಲ್ಲಿ ವ್ಯಕ್ತಿ ನೆಲೆಯಲ್ಲಿಯೇ ಕಂಡುಕೊಂಡಿದ್ದರು. ನವ್ಯವು ತನ್ನ ಪ್ರಾಮುಖ್ಯತೆಯನ್ನು ಕನ್ನಡ ಸಾಹಿತ್ಯದಲ್ಲಿ ಕಳೆದುಕೊಳ್ಳುವ ಹಂತವನ್ನು ತಲುಪಿದಾಗ ಹಲವಾರು ನವ್ಯದ ಬರಹಗಾರರು ತಮ್ಮ ಬರವಣಿಗೆಯ ದಿಕ್ಕನ್ನೇ ಬದಲಿಸಿಕೊಂಡರು. ಅನಂತಮೂರ್ತಿಯವರು 'ಸಂಸ್ಕಾರ' ಕಾದಂಬರಿಯಲ್ಲಿ ತಳೆದಿದ್ದ ವ್ಯಕ್ತಿಕೇಂದ್ರಿತ ನಿಲುವು 'ಭಾರತೀಪುರ' ಕಾದಂಬರಿಗೆ ಬರುವ ಹೊತ್ತಿಗೆ ಸಾಮಾಜಿಕ ಬದಲಾವಣೆಯ ನೆಲೆಯತ್ತ ಹೊರಳುತ್ತದೆ. ತೇಜಸ್ವಿಯವರು 'ಸ್ವರೂಪ' ಕಾದಂಬರಿ ಬರೆದಾಗ ಅದು ಪಕ್ಕಾ ನವ್ಯರ ವ್ಯಕ್ತಿ ವಿಶಿಷ್ಟವಾದಿ ನಿಲುವಾಗಿತ್ತು. 'ಅಬಚೂರಿನ ಪೋಸ್ಟಾಫೀಸು' ಕಥಾಸಂಕಲನದ ಹೊತ್ತಿಗೆ ನವ್ಯದಿಂದ ಭಿನ್ನಮಾರ್ಗವೊಂದನ್ನು ತಾನು ಕಂಡುಕೊಳ್ಳುತ್ತಿರುವುದಾಗಿ ಸಾರಿದರು. ಪಿ.ಲಂಕೇಶರಲ್ಲಿಯು 'ಬಿರುಕು' ಕಾದಂಬರಿಯಿಂದ 'ಮುಸ್ಸಂಜೆಯ ಕಥಾಪ್ರಸಂಗ'ಕ್ಕೆ ಬರುವ ಹೊತ್ತಿಗೆ ಇಂತಹುದೇ ಬದಲಾವಣೆಯಾಗಿದೆ. ಇಷ್ಟೆಲ್ಲಾ ತಾತ್ವಿಕ ಬದಲಾವಣೆಗಳು ನವ್ಯ ಲೇಖಕರಲ್ಲಿ ಸಂಭವಿಸಿದವು. ಈ ನಡುವೆ ಕುಸುಮಾಕರರ ನಿಲುವು ಯಾವ ರೀತಿಯದು? ಎಂಬ ಪ್ರಶ್ನೆಯೇಳುತ್ತದೆ.

ಯು.ಆರ್.ಅನಂತಮೂರ್ತಿ, ಕೆ.ಪಿ.ಪೂರ್ಣಚಂದ್ರತೇಜಸ್ವಿ ಮುಂತಾದ ನವ್ಯ ಬರಹಗಾರರಿಂದ ಕುಸುಮಾಕರರು ವಿಶಿಷ್ಟತೆಯನ್ನು ಪಡೆದಿರುವುದು ಇಲ್ಲಿಯೇ. ನವ್ಯದ ಬರಹಗಾರರಾದರೂ ಕುಸುಮಾಕರರು ನವೋದಯವನ್ನು ತಿರಸ್ಕರಿಸಿ ಹೊರಬಂದವರಲ್ಲ. ನವೋದಯ ಸಾಹಿತ್ಯದ ಪ್ರೇರಣೆಯು ಕುಸುಮಾಕರರ ಮೇಲಾಗಿದೆ. ಅವರ 'ಪರಿಘ' ಕಾದಂಬರಿಯಲ್ಲಿ ಸ್ವಾತಂತ್ರ್ಯ ಚಳುವಳಿಯ ಸನ್ನಿವೇಶಗಳು ಬರುತ್ತವೆ. ಕುಸುಮಾಕರರ ಕಾದಂಬರಿಗಳಲ್ಲಿ ಮನಃಶಾಸ್ತ್ರದ ಹಿನ್ನೆಲೆಯಿದೆ. ಸಿಗ್ಮಂಡ್ ಫ್ರಾಯ್ಡ್, ಸಿ.ಜೆ.ಯೂಂಗ್ ಮುಂತಾದ ಆಧುನಿಕ ಮನಃಶಾಸ್ತ್ರಜ್ಞರ ಮನಃಶಾಸ್ತ್ರೀಯ ಸಿದ್ಧಾಂತಗಳಿಂದ ಕುಸುಮಾಕರರು ಪ್ರೇರಣೆಯನ್ನು ಪಡೆದರು. ಮುಖವಾಡ, ಭ್ರಮೆ, ಈಡಿಪಸ್‌ಕಾಂಪ್ಲೆಕ್ಸ್, ಕನಸು ಮುಂತಾದ ಮನಸ್ಸಿನ ಪ್ರವೃತ್ತಿಗಳು ಕುಸುಮಾಕರರ ಕಾದಂಬರಿಗಳಲ್ಲಿ ಬಂದಿವೆ. ಯು.ಆರ್ .ಅನಂತಮೂರ್ತಿ, ಕೆ.ಪಿ.ಪೂರ್ಣಚಂದ್ರತೇಜಸ್ವಿಯವರ ಕೃತಿಗಳಲ್ಲಿ ಜೀವನ ನೋಡುವ ದೃಷ್ಟಿಕೋನವು ಪುರುಷ ಪ್ರಧಾನವಾದುದು. ಯು.ಆರ್ .ಅನಂತಮೂರ್ತಿಯವರು ತಮ್ಮ ಕೃತಿಗಳಲ್ಲಿ ಸ್ತ್ರೀ ಸಂವೇದನೆಗಳನ್ನು ತರುವುದೇ ಇಲ್ಲ. ತೇಜಸ್ವಿಯವರ 'ಕಿರಗೂರಿನ ಗಯ್ಯಾಳಿಗಳು' ಕಥೆಯೊಂದನ್ನು ಹೊರತುಪಡಿಸಿದರೆ ತೇಜಸ್ವಿಯವರು ಈ ದಿಶೆಯಲ್ಲಿ ಸಾಧನೆ ಮಾಡಿಲ್ಲ. ಇವರಲ್ಲಿ ಹೋಲಿಸಿದಲ್ಲಿ ಕುಸುಮಾಕರರು ತಮ್ಮ ಒಂದು ಕಾದಂಬರಿಯಲ್ಲಿ ಸ್ತ್ರೀ-ಸಂವೇದನೆಗಳನ್ನು, ಅವರ ಅಂತರಂಗದ ತುಡಿತಗಳನ್ನು ತರುವಲ್ಲಿ ಯಶಸ್ವಿಯಾಗಿದ್ದಾರೆ. ಇಲ್ಲಿಯೂ ಕೂಡ ಕುಸುಮಾಕರರು ಯು.ಆರ್ .ಅನಂತಮೂರ್ತಿ, ತೇಜಸ್ವಿಗಿಂತ ವಿಶಿಷ್ಟ ಸ್ಥಾನವನ್ನು ಪಡೆಯುವುದಕ್ಕೆ ಕಾರಣವಿದೆ. ಈ ದಿಸೆಯಲ್ಲಿ ಇವರಿಗೆ ಹೋಲಿಸಬಹುದಾದ ಲೇಖಕರೆಂದರೆ ಶಾಂತಿನಾಥ ದೇಸಾಯಿಯವರು.

## ಲೇಖಕರ ಹಿನ್ನೆಲೆ

ಕುಸುಮಾಕರರ ಮೂಲ ಹೆಸರು ವಸಂತ ಅನಂತ ದಿವಾಣಜಿ. ಇವರು ೧೯೩೦ರಲ್ಲಿ ಬಿಜಾಪುರ ಜಿಲ್ಲೆಯ 'ದೇವರಗೆಣ್ಣೂರು' ಎಂಬ ಹಳ್ಳಿಯಲ್ಲಿ ಜನಿಸಿದರು. ನೆರೆರಾಜ್ಯ ಮಹಾರಾಷ್ಟ್ರದ ಸೊಲ್ಲಾಪುರದಲ್ಲಿ ಕಾಲೇಜೊಂದರಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ್ದಾರೆ. ೨೦೦೫ಕ್ಕೆ ಇವರಿಗೀಗ ಎಪ್ಪತ್ತೈದು ವರ್ಷ. ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಐದು ಕಾದಂಬರಿಗಳು. 'ಸ್ವಪ್ನನೌಕೆ'(ಪ್ರಥಮ) ಕವನ ಸಂಕಲನ, 'ಪ್ರಸಾದ ಯೋಗ' ಎಂಬುದು ಪಿ.ಎಚ್.ಡಿ ಪ್ರಬಂಧ, 'ಗುರು ಪೌರ್ಣಿಮೆ' ಎಂಬ ಹೆಸರಿನಲ್ಲಿ ಬೇಂದ್ರೆ ಸಾಹಿತ್ಯ ಸಮೀಕ್ಷೆ ಮಾಡಿದ್ದಾರೆ. ಇತ್ತೀಚೆಗೆ 'ವಿರೋಚನ' ಎಂಬ ಕಾದಂಬರಿಯನ್ನು ಬರೆಯುತ್ತಿದ್ದಾರೆ ಎಂದು ಗೊತ್ತಾಗಿದೆ.

## ಅಧ್ಯಯನದ ವ್ಯಾಪ್ತಿ

'ಕುಸುಮಾಕರ ದೇವರಗೆಣ್ಣೂರರ ಕಾದಂಬರಿಗಳು' ಎಂಬ ಶೀರ್ಷಿಕೆಯಡಿಯಲ್ಲಿ ಈ ಕೆಳಕಂಡ ಮುಖ್ಯ ಆಶಯಗಳನ್ನಿಟ್ಟುಕೊಂಡು ಇವರ ಕಾದಂಬರಿಗಳನ್ನು ಅಧ್ಯಯನ ಮಾಡಲು ಯತ್ನಿಸಲಾಗಿದೆ.

೧. 'ಕುಸುಮಾಕರರ ಕಾದಂಬರಿಗಳಲ್ಲಿ ತಲೆಮಾರುಸಂಘರ್ಷದ ಸ್ವರೂಪ'

೨. 'ಕುಸುಮಾಕರರ ಕಾದಂಬರಿಗಳಲ್ಲಿ ವ್ಯಕ್ತಿವಿಶಿಷ್ಟತೆಯ ಸ್ವರೂಪ'

೩. 'ಕುಸುಮಾಕರರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧದ ಸ್ವರೂಪ'

೪. 'ಕುಸುಮಾಕರರ ಕಾದಂಬರಿಗಳಲ್ಲಿ ದಾರ್ಶನಿಕತೆಯ ಸ್ವರೂಪ'

ಇಲ್ಲಿನ ಮೊದಲನೆ ಆಶಯದಡಿಯಲ್ಲಿ ತಲೆಮಾರು ಸಂಘರ್ಷ ಎಂದರೇನು? ತಲೆಮಾರು ಸಂಘರ್ಷಕ್ಕೆ ಕಾರಣಗಳು; ವಿಧಗಳು. ಕುಸುಮಾಕರರ ಕಾದಂಬರಿಗಳಲ್ಲಿ ತಲೆಮಾರು ಸಂಘರ್ಷವು ಏಕೆ ಪ್ರಮುಖ ಆಶಯವಾಗಿದೆ? ತಲೆಮಾರು ಸಂಘರ್ಷವು ತಂದೆ-ಮಗನಲ್ಲಿ ಏಕೆ ತೀವ್ರವಾಗಿದೆ? ಎಂಬುದನ್ನು ಚರ್ಚಿಸಲಾಗಿದೆ.

ಎರಡನೆಯ ಆಶಯದಡಿಯಲ್ಲಿ ವ್ಯಕ್ತಿ ವಿಶಿಷ್ಟತೆ ಎಂದರೇನು?, ವ್ಯಕ್ತಿವಿಶಿಷ್ಟವಾದ, ವ್ಯಕ್ತಿ ವಿಶಿಷ್ಟತೆಯು ನಗರ ಜೀವನದೊಡನೆ ಯಾವ ರೀತಿಯ ಸಂಬಂಧ ಹೊಂದಿದೆ?, ಕಾದಂಬರಿಗಳಲ್ಲಿ ವ್ಯಕ್ತಿವಿಶಿಷ್ಟತೆಯ ಸ್ವರೂಪ; ಅದನ್ನು ಅಭಿವ್ಯಕ್ತಿ ಮಾಡಲು ಬಳಸಿರುವ ಧಾಟಿ; ವ್ಯಕ್ತಿವಿಶಿಷ್ಟವಾದದ ಸಂಘರ್ಷಗಳು; ತಲೆಮಾರು ಸಂಘರ್ಷಕ್ಕೂ ಇದಕ್ಕೂ ಇರುವ ಅಂತರ್‌ಸಂಬಂಧ - ಇವುಗಳ ಬಗ್ಗೆ ಚರ್ಚಿಸಲಾಗಿದೆ.

ಮೂರನೆಯ ಆಶಯದಡಿಯಲ್ಲಿ ನಮ್ಮ ಸಾಹಿತ್ಯವು ಏಕೆ ಪುರುಷಪ್ರಧಾನ?, ಗಂಡು-ಹೆಣ್ಣಿನ ಸಂಬಂಧಗಳನ್ನು ಏಕೆ ನಮ್ಮರು ಚಿತ್ರಿಸುತ್ತಾರೆ?, ಕಾದಂಬರಿಯಲ್ಲಿ ಕಾಮವನ್ನು ಕುರಿತಂತೆ ಇರುವ ಗ್ರಹಿಕೆಗಳೇನು?, ಮಹಿಳೆಯರ ಬಗೆಗೆ ಕಾದಂಬರಿಗಳ ದೃಷ್ಟಿಕೋನವೇನು? ಎಂಬುದನ್ನು ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಆಶಯದಡಿಯಲ್ಲಿ ಕಾದಂಬರಿಗಳಲ್ಲಿ ದಾರ್ಶನಿಕತೆಯ ಸ್ವರೂಪ ಹೇಗಿದೆ?, ಯಾವ ಹೊಸ ಬಗೆಯ ದರ್ಶನಗಳನ್ನು ಕಾದಂಬರಿಗಳು ಓದುಗರಿಗೆ ಕಟ್ಟಿಕೊಡುತ್ತವೆ? ಎಂಬುದನ್ನು ಚರ್ಚಿಸಲಾಗಿದೆ.

ಕುಸುಮಾಕರರ ಒಟ್ಟು ಸಾಹಿತ್ಯದಲ್ಲಿ ಈ ಕೆಳಕಂಡ ಕಾದಂಬರಿಗಳನ್ನು ಅಧ್ಯಯನಕ್ಕಾಗಿ ಬಳಸಿ ಕೊಳ್ಳಲಾಗಿದೆ.

೧. 'ಮುಗಿಯದ ಕತೆ'(೧೯೬೫)

೨. 'ನಾಲ್ಕನೆಯ ಆಯಾಮ'(೧೯೬೬)

೩. 'ನಿರಿಂದ್ರಿಯ' (೧೯೯೩)

೪. 'ಪರಿಘ' (೧೯೯೫)

೫. 'ಬಯಲು-ಬಸಿರು' (೨೦೦೪)

೧೯೬೫ ರಿಂದ ೨೦೦೪ರವರೆಗಿನ ಕುಸುಮಾಕರರ ಸಾಹಿತ್ಯದಲ್ಲಿ ಕಾದಂಬರಿ ಪ್ರಕಾರವನ್ನು ಮಾತ್ರ ಪ್ರಸ್ತುತ ಅಧ್ಯಯನಕ್ಕಾಗಿ ಬಳಸಿಕೊಂಡಿದೆ.

## ಅಧ್ಯಯನ ವಿಧಾನ

ವಿಧಾನವೆಂದರೆ ದೃಷ್ಟಿಕೋನ. ಸಾಹಿತ್ಯ ಕೃತಿಯನ್ನು ಯಾವ ದೃಷ್ಟಿಕೋನದಲ್ಲಿ ನೋಡುತ್ತೇವೆ? ಎಂಬುದನ್ನು ಅಧ್ಯಯನ ವಿಧಾನವೆಂದು ಕರೆಯುತ್ತೇವೆ. ಇಂದು ಹಲವಾರು ಅಧ್ಯಯನ ವಿಧಾನಗಳು ಸಾಹಿತ್ಯ ಕೃತಿಗಳ ಚರ್ಚೆಯ ಸಂದರ್ಭದಲ್ಲಿ ಅಸ್ತಿತ್ವದಲ್ಲಿವೆ. ಅವುಗಳಲ್ಲಿ ರೂಪನಿಷ್ಟ ವಿಧಾನವೂ ಒಂದು. ಇದು ಸಾಹಿತ್ಯ ಕೃತಿಯ ಹೊರಮೈಗೆ ಸಂಬಂಧಿಸಿದ್ದು. ಸಾಹಿತ್ಯಕೃತಿಯಲ್ಲಿನ ಪಾತ್ರಗಳು, ಕಥಾಸಂವಿಧಾನ, ವಸ್ತು, ಭಾಷೆ, ಶೈಲಿ, ತಂತ್ರ, ಸಂಭಾಷಣೆ, ನಾಟಕೀಯತೆ ಮುಂತಾದ ಅಂಶಗಳನ್ನು ಕುರಿತು ಅಧ್ಯಯನ ಮಾಡುತ್ತದೆ. ಆ ಮೂಲಕ ಸಾಹಿತ್ಯ ಕೃತಿಯು ಕಲಾತ್ಮಕತೆಯಲ್ಲಿ ಯಶಸ್ಸನ್ನು ಪಡೆದಿದೆಯೋ, ಇಲ್ಲವೊ ಎಂಬ ತೀರ್ಮಾನಕ್ಕೆ ಬರಲಾಗುತ್ತದೆ. ನವ್ಯ ಸಾಹಿತ್ಯವು ಈ ವಿಧಾನವನ್ನು ಬಳಸಿಕೊಂಡಿದೆ. ಪ್ರಸ್ತುತ ಅಧ್ಯಯನದಲ್ಲಿ ಈ ಅಧ್ಯಯನ ವಿಧಾನವು ಆಂಶಿಕವಾಗಿ ಬಳಕೆಯಾಗಿದೆ.

ನವ್ಯ ಸಾಹಿತ್ಯವನ್ನು ಮನಃಶಾಸ್ತ್ರೀಯ ವಿಧಾನದಲ್ಲೂ ಸಾಕಷ್ಟು ಅಧ್ಯಯನ ಮಾಡಲಾಗಿದೆ. ಕುಸುಮಾಕರರ 'ನಾಲ್ಕನೆಯ ಆಯಾಮ'ವನ್ನು ಕುರಿತ ಲೇಖನದಲ್ಲಿ ಶಾಂತಿನಾಥ ದೇಸಾಯಿಯವರು ಈ ಅಧ್ಯಯನ ವಿಧಾನವನ್ನು ಬಳಸಿಕೊಂಡಿದ್ದಾರೆ. ಸಾಹಿತ್ಯ ಕೃತಿಗಳಲ್ಲಿ ಬರುವ ಪಾತ್ರಗಳ ಮಾನಸಿಕ ವಿಶ್ಲೇಷಣೆಯು ಇಲ್ಲಿ ಪ್ರಾಮುಖ್ಯತೆ ಪಡೆಯುತ್ತದೆ. ಕುಸುಮಾಕರರ ಕಾದಂಬರಿಗಳು ಮನಃಶಾಸ್ತ್ರೀಯ ಹಿನ್ನೆಲೆಯಲ್ಲಿ ರಚನೆಯಾಗಿರು ವುದರಿಂದ, ಪ್ರಸ್ತುತ ಅಧ್ಯಯನದಲ್ಲಿ ಈ ಅಧ್ಯಯನ ವಿಧಾನವು ಅಲ್ಲಲ್ಲಿ ಬಳಕೆಯಾಗಿದೆ.

ಇವುಗಳ ಜೊತೆಗೆ ಸಮಾಜಶಾಸ್ತ್ರೀಯ ಅಧ್ಯಯನವು ಇಲ್ಲಿ ಬಳಕೆಯಾಗಿದೆ. ನವ್ಯ ಸಾಹಿತ್ಯವು ಭಾರತೀಯ ಸಮಾಜದಲ್ಲಿ ಉಂಟಾದ ಸಾಮಾಜಿಕ ಪಲ್ಲಟಗಳಿಂದ ಉಗಮಗೊಂಡಿತು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಈ ಅಧ್ಯಯನ ವಿಧಾನವನ್ನು ಬಳಸಿಕೊಂಡಿದೆ.

ಇವುಗಳಲ್ಲದೆ ಅಸ್ತಿತ್ವವಾದ ಮುಂತಾದ ಬೇರೆ ಬೇರೆ ತಾತ್ವಿಕ ಸಿದ್ಧಾಂತಗಳ ಹಿನ್ನೆಲೆಯಲ್ಲಿ ನೋಡುವ ಅಧ್ಯಯನ ವಿಧಾನಗಳು ಬಳಕೆಯಾಗಿವೆ. ಚಾರಿತ್ರಿಕ ಅಧ್ಯಯನ ವಿಧಾನ, ಎರಡು ಅಧ್ಯಯನ ವಿಧಾನಗಳನ್ನು ಮಿಶ್ರಣ ಮಾಡಿ ಸಾಹಿತ್ಯ ಕೃತಿಯನ್ನು ನೋಡುವ ತೌಲನಿಕ ಅಧ್ಯಯನಗಳು ಬಳಕೆಯಲ್ಲಿವೆ. ಪ್ರಸ್ತುತ ಅಧ್ಯಯನದಲ್ಲಿ ಇವುಗಳ ಬಳಕೆ ಕಡಿಮೆ ಎಂದು ಹೇಳಬಹುದು. ಈ ಎಲ್ಲಾ ಅಧ್ಯಯನ ವಿಧಾನಗಳನ್ನು ಮಿಶ್ರಣ ಮಾಡಿ ಸಾಹಿತ್ಯಕೃತಿಯನ್ನು ನೋಡುವ ಸಾಂಸ್ಕೃತಿಕ ಅಧ್ಯಯನ ವಿಧಾನವು ಇಂದು ಪ್ರಾಮುಖ್ಯತೆಗೆ ಬಂದಿದೆ. ಪ್ರಸ್ತುತ ಅಧ್ಯಯನವು ವೈಚಾರಿಕತೆಯನ್ನು ಪ್ರಧಾನವಾದ ನೆಲೆಯಲ್ಲಿ ಇಟ್ಟುಕೊಂಡು, ಕುಸುಮಾಕರರ ಕಾದಂಬರಿಗಳಲ್ಲಿ ಪ್ರಮುಖವಾದ ನಾಲ್ಕು ಆಶಯಗಳನ್ನು ಗುರ್ತಿಸಿ, ಅವುಗಳ ವ್ಯಾಪ್ತಿಗನುಗುಣವಾಗಿ ಸಾಂಸ್ಕೃತಿಕ ಅಧ್ಯಯನ ವಿಧಾನದ ಮಾದರಿಯನ್ನು ಅನುಸರಿಸಿದೆ.

## ಈವರೆಗಿನ ಅಧ್ಯಯನಗಳ ಸಮೀಕ್ಷೆ

ಸುಮಾರು ಐವತ್ತು ವರ್ಷಗಳ ಬರವಣಿಗೆಯ ದೀರ್ಘ ಇತಿಹಾಸವನ್ನು ಹೊಂದಿದ್ದರೂ ಕುಸುಮಾಕರರ ಸಾಹಿತ್ಯವನ್ನು ಕುರಿತು ಬಂದಿರುವ ವಿಮರ್ಶೆ ಅತ್ಯಲ್ಪ. ಅವುಗಳನ್ನು ನೋಡುವುದಾದರೆ ಶಾಂತಿನಾಥ ದೇಸಾಯಿಯವರಿಂದ 'ನಾಲ್ಕನೆಯ ಆಯಾಮ'ವನ್ನು ಕುರಿತು ೧೯೬೮ರಲ್ಲಿ ಒಂದು ಲೇಖನ ಬಂದಿದೆ. ನಂತರ ಕುಸುಮಾಕರರ ಒಟ್ಟು ಸಾಹಿತ್ಯವನ್ನು ಕುರಿತು 'ಕುಸುಮಾಕರ ದೇವರ ಗೆಣ್ಣೂರರ ಸಾಹಿತ್ಯ: ಒಂದು ಸಮೀಕ್ಷೆ' ಎಂಬ ಶೀರ್ಷಿಕೆಯಡಿಯಲ್ಲಿ ಸಿ.ಎನ್.ರಾಮಚಂದ್ರನ್ ಅವರು ಸಂಕ್ಷಿಪ್ತವಾದ ವಿಶ್ಲೇಷಣೆ ಮಾಡಿದ್ದಾರೆ. ಇತ್ತೀಚೆಗೆ ಪ್ರಕಟವಾದ 'ಬಯಲು ಬಸಿರು' ಕಾದಂಬರಿಯನ್ನು ಕುರಿತಂತೆ ರಹಮತ್ ತರೀಕೆರೆ ಅವರು 'ಜಾಗತೀಕರಣಕ್ಕೆ ಪ್ರತಿಕ್ರಿಯೆಯಾಗಿ'? ಎಂಬ ಲೇಖನ 'ಮಯೂರ' ಮಾಸಪತ್ರಿಕೆಯಲ್ಲಿ ಪ್ರಕಟಗೊಂಡಿದೆ ಇತರ ಕಾದಂಬರಿಗಳ ಆಂಶಿಕ ಚರ್ಚೆಯು ಈ ಲೇಖನದಲ್ಲಿ ಬಂದಿದೆ. ಓ.ಎಲ್.ನಾಗಭೂಷಣ-ಸ್ವಾಮಿಯವರ 'ಪ್ರಜ್ಞಾ ಪ್ರವಾಪತಂತ್ರ' ಕೃತಿಯಲ್ಲಿ 'ನಾಲ್ಕನೆಯ ಆಯಾಮ' ಸಾಂದರ್ಭಿಕವಾಗಿ ಚರ್ಚೆಯಾಗಿದೆ. ಇನ್ನುಳಿದಂತೆ ನವ್ಯಸಾಹಿತ್ಯ ಚರ್ಚೆಯ ಸಂದರ್ಭದಲ್ಲಿ ಕುಸುಮಾಕರರ ಹೆಸರು ಅಲ್ಲಲ್ಲಿ ಪ್ರಸ್ತಾಪಗೊಂಡಿದೆ.

'ಕುಸುಮಾಕರರ ನಾಲ್ಕನೆಯ ಆಯಾಮ' ಎಂಬ ಶೀರ್ಷಿಕೆಯಲ್ಲಿ 'ನಾಲ್ಕನೆಯ ಆಯಾಮ' ಕಾದಂಬರಿಯನ್ನು ಶಾಂತಿನಾಥ ದೇಸಾಯಿಯವರು ವಿಶ್ಲೇಷಿಸಿದ್ದಾರೆ. ನವ್ಯದ ಇತರ ಕೃತಿಗಳೊಡನೆ ಇಟ್ಟು 'ನಾಲ್ಕನೆಯ ಆಯಾಮ'ವನ್ನು ನೋಡಿದ್ದಾರೆ. ಕುಸುಮಾಕರರು ತಮ್ಮ ಕೃತಿಯಲ್ಲಿ ದುರ್ಬಲ ನಾಯಕನನ್ನು ಸಮಾಜದ ಹುಳುಕುಗಳನ್ನು ಎತ್ತಿ ತೋರಿಸಲು ಸೂಕ್ತ ಸಾಧನವಾಗಿ ಬಳಸಿಕೊಂಡಿದ್ದಾರೆ ಎಂಬ ಅಭಿಪ್ರಾಯವಿದೆ. ಈ ಕೃತಿಯು ಆಧುನಿಕ ಮನಃಶಾಸ್ತ್ರದ ಸಿದ್ಧಾಂತಗಳ ಹಿನ್ನೆಲೆಯಲ್ಲಿ ರೂಪುಗೊಂಡಿದೆ. 'ನಾಲ್ಕನೆಯ

ಆಯಾಮ' ಕೃತಿಯನ್ನು ನಾಲ್ಕು ಭಾಗಗಳಾಗಿ ವಿಭಾಗಿಸಿ, ಯಾವ ಭಾಗದಲ್ಲಿ ಕೃತಿಯು ಯಾವ ಅಂಶವನ್ನು ಹೇಳುತ್ತದೆಂದು ವಿಶ್ಲೇಷಿಸಿದ್ದಾರೆ. ಆದರೆ ಇಲ್ಲಿ ವಿಶ್ಲೇಷಣೆಗಿಂತ ಕಥಾಸಾರವೇ ಹೆಚ್ಚಾಗಿ ಬಂದಿದೆ. 'ನಾಲ್ಕನೆಯ ಆಯಾಮ' ಕೃತಿಯನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ, ಅವುಗಳಲ್ಲಿ ಕಥೆಯು ಯಾವ ರೀತಿ ಸಾಗುತ್ತದೆ ಎಂಬಂತೆ ಕಾಣುತ್ತದೆ.

ಕಾದಂಬರಿಯ ಶಿಲ್ಪ ಶಿಥಿಲವಾಗಿದೆ ಎಂದರೂ, ಕಾದಂಬರಿಯಲ್ಲಿನ ಭಾಷೆ, ತಂತ್ರಗಾರಿಕೆ, ನಿರೂಪಣೆಯಲ್ಲಿನ ತಾಟಸ್ಥ್ಯತೆಯನ್ನು ವಿಮರ್ಶೆಯು ಮೆಚ್ಚಿಕೊಳ್ಳುತ್ತದೆ. ಆದರೆ ಕಾದಂಬರಿಯಲ್ಲಿ ಹೊಸ ಮೌಲ್ಯಗಳ ಅವಶ್ಯಕತೆಯು ಕಂಡುಬರುತ್ತದೆಯೇ ಹೊರತು, ಆ ಮೌಲ್ಯಗಳ ಅನ್ವೇಷಣೆಯು ಕಾದಂಬರಿ ಯಲ್ಲಿಲ್ಲ. ತಾತ್ವಿಕ ಆಯಾಮದ ಕೊರತೆ ಇದು‌ಲ್ಲಿದೆ ಎಂಬ ಅಭಿಪ್ರಾಯದೊಂದಿಗೆ ಲೇಖನ ಮುಕ್ತಾಯ ಹೊಂದುತ್ತದೆ. ಈ ಲೇಖನದ ಪ್ರಾರಂಭದಲ್ಲಿನ ವಿಮರ್ಶಾಕರ ಸಾಲುಗಳಿವು.

> "ಸದ್ಯಕ್ಕೆ ನಮ್ಮ ನವ್ಯತೆಯೆಲ್ಲ ಕೆಲವೇ ಸಾಹಿತಿಗಳಿಗೆ ಸೀಮಿತವಾಗಿ, ನೂರಕ್ಕೆ ೯೦ರಷ್ಟು ಸಾಹಿತಿಗಳು ನವ್ಯತೆಯ ಸಂಬಂಧವಿಲ್ಲದೆ, ಅದರ ಅರಿವು ಕೂಡ ತೋರಿಸದೆ, ಹಳೇ ಸವೆದ, ಅರ್ಥಶೂನ್ಯವಾದ ರೀತಿಯಲ್ಲಿ ಬರೆಯುತ್ತಾರೆ ಎಂಬುದನ್ನು ನಾವು ಲಕ್ಷ್ಯದಲ್ಲಿಡಬೇಕಾದದ್ದು ಅವಶ್ಯ."[೧]

ಇಲ್ಲಿ ಶಾಂತಿನಾಥ ದೇಸಾಯಿಯವರು ತುಂಬಾ ತೀಕ್ಷ್ಣವಾಗಿ ನವೋದಯ ಸಾಹಿತ್ಯವನ್ನು ಟೀಕಿಸುವುದರೊಂದಿಗೆ ನವ್ಯ ಸಾಹಿತ್ಯವನ್ನು ಸಮರ್ಥಿಸಿದ್ದಾರೆ. ನವ್ಯದ ಆರಂಭದ ಘಟ್ಟದಲ್ಲಿ ಈ ರೀತಿಯ ಸಮರ್ಥನೆಯು ಅಗತ್ಯವಾಗಿರಬಹುದು ನಿಜ. ಆದರೆ ಈ ರೀತಿಯ ನವ್ಯದ ಪರವಾದ ಮನೋಧೋರಣೆಯಲ್ಲಿಯೇ ನವ್ಯ ಕಾದಂಬರಿಯನ್ನು ಪ್ರವೇಶಿಸುವುದು ಎಷ್ಟು ಸಮಂಜಸ?, ವಿಮರ್ಶಕರ ಪೂರ್ವಾಗ್ರಹ ಪೀಡಿತ ದೃಷ್ಟಿಕೋನವು ಈ ವಿಮರ್ಶಾ ಲೇಖನದ ಮೇಲೆ ಪ್ರಭಾವ ಬೀರಿದೆ.

ಸಿ.ಎನ್.ರಾಮಚಂದ್ರನ್‌ರವರು 'ಮುಗಿಯದ ಕತೆ'ಯನ್ನು 'ಕ್ಷುದ್ರತೆಯ ಅಧ್ಯಯನ' ಎಂದಿದ್ದಾರೆ. ದೇಶಪಾಂಡೆಯಲ್ಲಿನ ತೀವ್ರ ಕೀಳರಿಮೆ ಮತ್ತು ವ್ಯಕ್ತಿತ್ವದಲ್ಲಿ ಆಗುವ ಆಗಾಧ ಪರಿವರ್ತನೆಯನ್ನು ಒಪ್ಪಿಕೊಂಡಿಲ್ಲದಿದ್ದರೂ, ಕಾದಂಬರಿಯಲ್ಲಿನ ಇಂಗ್ಲಿಷ್ ಭಾಷೆಯ ಔಚಿತ್ಯವನ್ನು ಮೆಚ್ಚಿಕೊಂಡಿದ್ದಾರೆ.

'ನಾಲ್ಕನೆಯ ಆಯಾಮ'ವು ತನ್ನ ಕಾಳಜಿ ಹಾಗೂ ತಾಂತ್ರಗಳಲ್ಲಿ 'ಬಿರುಕು' ಕಾದಂಬರಿಯನ್ನು ಹೋಲುತ್ತದೆಂಬ ಅಭಿಪ್ರಾಯ ಇವರದು. ಕಿಶೋರಾವಸ್ಥೆಯ ಮಾನಸಿಕ ಚಿತ್ರಣ, ಕಡಿಮೆ ನಿರೂಪಣೆ, ಭಾಷೆಯಲ್ಲಿನ ನಾಟಕೀಯತೆ, ಉತ್ತಮವಾಗಿವೆ ಎಂಬ ಅಭಿಪ್ರಾಯದೊಂದಿಗೆ, ಶಾಂತಿನಾಥ ದೇಸಾಯಿಯವರ 'ನಾಲ್ಕನೆಯ ಆಯಾಮ'ಕ್ಕೆ 'ತಾತ್ವಿಕತೆಯ ಆಯಾಮ'ವಿಲ್ಲವೆಂಬ ಹೇಳಿಕೆಯನ್ನು ಪ್ರಶ್ನಿಸಿ, ಅವರ ದೃಷ್ಟಿಕೋನದಲ್ಲಿ ನವ್ಯಯುಗದ ನಿರೀಕ್ಷೆ ಗೃಹೀತಗಳಿವೆ ಎಂಬ ತೀರ್ಮಾನಕ್ಕೆ ಬಂದಿದ್ದಾರೆ.

'ನಾಲ್ಕನೆಯ ಆಯಾಮ'ಕ್ಕೆ ಸಂಬಂಧಿಸಿದ ಈ ಎರಡು ವಿಮರ್ಶಾಲೇಖನಗಳು ಇಲ್ಲಿನ ಕಥಾನಾಯಕನಿಗೆ ಹೆಸರಿಲ್ಲವೆಂದು ಹೇಳಿವೆ. ಆದರೆ ಕಾದಂಬರಿಯಲ್ಲಿ ಬಹುತೇಕ ಎಲ್ಲ ಕಡೆ ಹೆಸರಿಲ್ಲದಿದ್ದರೂ ಒಂದು ವಿಶೇಷ ಸಂದರ್ಭದಲ್ಲಿ ಮಾತ್ರ ಅವರ ಹೆಸರು ಬಳಕೆಯಾಗಿದೆ. ಇದಕ್ಕೆ ಕಾರಣ ಕಾದಂಬರಿಯ ತಂತ್ರಗಾರಿಕೆಯ ವಿಫಲತೆಯೋ? ಓದುವಿಕೆಯಲ್ಲಿನ ದೋಷವೋ? ಇರಬಹುದು.

'ನಿರಿಂದ್ರಿಯ' ಕಾದಂಬರಿಯನ್ನು ಮಧ್ಯಮ ವರ್ಗದ ಶಾಪವಾದ 'ಅಭದ್ರತೆಯ ಅಧ್ಯಯನ' ಎಂದಿದ್ದಾರೆ. ಫ್ರೆಂಚ್ ಕಾದಂಬರಿಕಾರ ಕಮೂನ ಪ್ರಭಾವವು ಇದರ ಮೇಲಾಗಿದೆಯೆಂಬ ಅಭಿಪ್ರಾಯ ಇವರದು. ಪುರುಷ ಕೇಂದ್ರಿತ ದೃಷ್ಟಿಕೋನವು ಸ್ತ್ರೀ ಸಂವೇದನೆಯೆಡೆಗೆ ಹೊರಳಿರುವುದು ಇವರ ಗಮನ ಸೆಳೆದಿದೆ. ನಗರ ಜೀವನದ ರಿಕ್ತತೆ, ಕಾದಂಬರಿಯ ತಂತ್ರದ ಬಗ್ಗೆ ಇವರ ಮೆಚ್ಚುಗೆಯಿದೆ. 'ಪರಿಘ' ಕಾದಂಬರಿಯು ಕಪ್ಪು-ಬಿಳುಪು ಪಾತ್ರ ಚಿತ್ರಣದಿಂದ, ಕಡಿಮೆ ನಾಟಕೀಯತೆ ಮತ್ತು ಹೆಚ್ಚಿದ ನಿರೂಪಣೆಯಿಂದ, ಮತ್ತು ತಾತ್ವಿಕವಾಗಿಯೂ ಇದೊಂದು ವಿಫಲ ಕೃತಿ ಎಂಬ ಅಭಿಪ್ರಾಯವನ್ನು ವಿಮರ್ಶೆಯು ವ್ಯಕ್ತಪಡಿಸುತ್ತದೆ.

ಇವರು ಲೇಖನದ ಕಡೆಯಲ್ಲಿ ಕುಸುಮಾಕರರ ಕಾದಂಬರಿಯಲ್ಲಿನ ಉತ್ತಮಾಂಶಗಳನ್ನು ಪಟ್ಟಿ ಮಾಡಿದ್ದಾರೆ.

'ಜಾಗತೀಕರಣಕ್ಕೆ ಪ್ರತಿಕ್ರಿಯೆಯಾಗಿ'? ಎಂಬ ಲೇಖನವು ಇತ್ತೀಚಿನ 'ಬಯಲು-ಬಸಿರು' ಕಾದಂಬರಿಯನ್ನು ಪ್ರಧಾನವಾಗಿಟ್ಟುಕೊಂಡಿದ್ದರೂ, ಕುಸುಮಾಕರರ ಜೀವನವನ್ನು, ಯಾವ ಸನ್ನಿವೇಶದಲ್ಲಿ ಅವರ ಬರವಣಿಗೆಯು ಬಂದಿದೆ ಎಂಬುದನ್ನು ಆಂಶಿಕವಾಗಿ ತಂದಿದೆ.

'ಬಯಲು ಬಸಿರು' ಒಂದು ದಾರ್ಶನಿಕ ಹುಡುಕಾಟದ ಕೃತಿ. ಚಿಂತನಾಶೀಲತೆ, ತಾತ್ವಿಕತೆಯ ಅನ್ವೇಷಣೆ, ಜಿಜ್ಞಾಸೆ -ಇದರಲ್ಲಿ ಪ್ರಧಾನವಾಗಿವೆ. ಇದು ವ್ಯಕ್ತಿ ಕೇಂದ್ರಿತ ಕಾದಂಬರಿಯಾದರೂ ಅದನ್ನು ಮೀರಿ ಆಧುನಿಕ ವಿಜ್ಞಾನ, ಬಲಿಷ್ಠ ದೇಶಗಳ ರಾಜಕಾರಣ, ಅವುಗಳ ಆರ್ಥಿಕ ಹುನ್ನಾರಗಳು, ಬಡದೇಶಗಳ ಬಡತನ ಮುಂತಾದ ಆರ್ಥಿಕ ರಾಜಕೀಯ ಪ್ರಶ್ನೆಗಳನ್ನೆತ್ತಿ, ಅಂತರರಾಷ್ಟ್ರೀಯ ಆಯಾಮವನ್ನು ಪಡೆದುಕೊಳ್ಳುತ್ತದೆ ಎಂಬ ಅಭಿಪ್ರಾಯ ಇವರದು. ಜೊತೆಗೆ ಕಾದಂಬರಿಯಲ್ಲಿನ 'ಜೀವಿಕೇಂದ್ರಿತ ಪರಿಸರವಾದ', ನಾಟಕೀಯ ಸಂಭಾಷಣೆ, ಮನಸ್ಸಿನ ವಿಶ್ಲೇಷಣೆ ಮಾಡುವ ಕುಶಲತೆ, ಮುಂತಾದವು ವಿಮರ್ಶಕರ ಗಮನ ಸೆಳೆದಿವೆ.

ಅಮೇರಿಕಾದ ಸಮಕಾಲೀನ ರಾಜಕಾರಣದ ಬಗ್ಗೆ ಇರುವ ನಿರಾಸಕ್ತಿ, ವೈಯಕ್ತಿಕ ಕಾಳಜಿಗಳು ಲೋಕದ ಕಾಳಜಿಗಳಾಗಿರುವುದು, ಕಥನದಲ್ಲಿ ಸಮುದಾಯ ಜೀವನ ದುರ್ಬಲವಾಗಿರುವುದು, ಮಹಿಳಾ ಲೋಕದ ಗೈರು ಹಾಜರಿ, ಮುಂತಾದ ಅಂಶಗಳನ್ನು ಲೇಖನವು ಕಾದಂಬರಿಯಲ್ಲಿನ ಮಿತಿಗಳೆಂದು ಗುರುತಿಸಿದೆ.

> "ಈಗ ನಮ್ಮ ಲೇಖಕರು ಯಾವುದೇ ಬಗೆಯ ದರ್ಶನದ ಬೆನ್ನು ಹತ್ತಿರಲಿ, ಅದು ಜಾಗತೀಕರಣಕ್ಕೆ ಹೇಗಾದರೂ ಮುಖಾಮುಖಿ ಮಾಡಿಯೇ ತೀರಬೇಕು. ತೀರ ವೈಯಕ್ತಿಕ ಎನಿಸುವ ಕಥನಗಳೂ ಅಥವಾ ದಾರ್ಶನಿಕತೆಗೂ ಇದು ಬಿಟ್ಟಿಲ್ಲ".[೨]

ಜಾಗತೀಕರಣವು ಇಂದು ಕನ್ನಡ ಸಾಹಿತ್ಯದ ಮೇಲೆ ಅಗಾಧ ಪರಿಣಾಮ ಬೀರುತ್ತಿದೆ. ಅದರ ಪ್ರೇರಣೆಯು 'ಬಯಲು-ಬಸಿರು' ಕಾದಂಬರಿಯ ಮೇಲಾಗಿದೆ ಎಂಬ ಅಭಿಪ್ರಾಯದೊಂದಿಗೆ ಲೇಖನ ಮುಕ್ತಾಯವಾಗುತ್ತದೆ.

ಕುಸುಮಾಕರರ 'ನಾಲ್ಕನೆಯ ಆಯಾಮ' ಒಂದು ಮನೋವಿಶ್ಲೇಷಣಾತ್ಮಕ ಕಾದಂಬರಿಯಾಗಿದೆ. ಸ್ಮೃತಿ ಮತ್ತು ಕನಸುಗಳು ಇಲ್ಲಿನ ಮನೋವಿಶ್ಲೇಷಣೆಗೆ ಸಹಾಯಕವಾಗಿವೆ. ಇಲ್ಲಿನ ಪ್ರಜ್ಞೆಯ ಹರಿವು ವ್ಯಾಖ್ಯಾನರೂಪವಾದದ್ದು. ಪಾತ್ರಚಿತ್ರಣದ ಆಚೆಗೆ ಲೇಖಕರ ವ್ಯಾಖ್ಯಾನ, ಕಾದಂಬರಿಯ ಸನ್ನಿವೇಶ, ಸಂಗತಿಗಳು ಹರಿಯುವುದಿಲ್ಲ. ತಾತ್ವಿಕವಾಗಿ ಈ ಕೃತಿಯು ಏನನ್ನೂ ಧ್ವನಿಸುವುದಿಲ್ಲ -ಎಂಬ ಅಭಿಪ್ರಾಯವನ್ನು ಓ.ಎಲ್.ನಾಗಭೂಷಣ ಸ್ವಾಮಿಯವರು ತಮ್ಮ ಕೃತಿಯಲ್ಲಿ ವ್ಯಕ್ತಪಡಿಸಿದ್ದಾರೆ.

**ಟಿಪ್ಪಣಿಗಳು**

೧. ಶಾಂತಿನಾಥ ದೇಸಾಯಿ, ಕುಸುಮಾಕರರ ನಾಲ್ಕನೆಯ ಆಯಾಮ, ಪು.೧೩೬

೨. ರಹಮತ್ ತರೀಕೆರೆ, ಜಾಗತೀಕರಣಕ್ಕೆ ಪ್ರತಿಕ್ರಿಯೆಯಾಗಿ?, ಪು.೨೦

೨

# ಕುಸುಮಾಕರರ ಕಾದಂಬರಿಗಳಲ್ಲಿ ತಲೆಮಾರುಗಳ ಸಂಘರ್ಷದ ಸ್ವರೂಪ

## ತಲೆಮಾರು ಸಂಘರ್ಷದ ಅರ್ಥ

ನಮ್ಮ ಸಮಾಜದಲ್ಲಿ ವಿಭಿನ್ನ ವಯೋಮಾನಕ್ಕೆ ಸೇರಿದ ಜನರಿದ್ದಾರೆ. ಒಂದು ಕುಟುಂಬದಲ್ಲಿಯೂ ಕೂಡ ಬೇರೆ ಬೇರೆ ತಲೆಮಾರುಗಳ ಜನ ವಾಸವಾಗಿರುತ್ತಾರೆ. ಈ ತಲೆಮಾರುಗಳ ನಡುವೆ ಒಂದಲ್ಲ ಒಂದು ರೀತಿಯ ಸಂಘರ್ಷಗಳು ನಡೆಯುತ್ತಲೇ ಇರುತ್ತವೆ. ಅದರಲ್ಲೂ ಆಧುನಿಕತೆಗೆ ತೆರೆದುಕೊಂಡ ತಲೆಮಾರು ಇದ್ದರೆ, ಸಂಪ್ರದಾಯವಾದಿ ತಲೆಮಾರಿನ ಜೊತೆ ಸಂಘರ್ಷ ಇನ್ನು ತೀವ್ರವಾಗಿರುತ್ತದೆ. 'ಸಂಘರ್ಷ' ಎಂಬ ಶಬ್ದದ ಅರ್ಥವು ಘರ್ಷಣೆ, ತಿಕ್ಕಾಟ ಎಂಬುದಕ್ಕಿಂತ ಭಿನ್ನವಾದ ಅರ್ಥವನ್ನು ಪಡೆದಿದೆ. 'ಘರ್ಷಣೆ' ಎಂದರೆ ಜಗಳ, ಹೋರಾಟ, ಇಬ್ಬರು ವ್ಯಕ್ತಿಗಳ ಅಥವಾ ಎರಡು ಗುಂಪುಗಳ ನಡುವಿನ ಹಿಂಸಾತ್ಮಕ ಹೋರಾಟ. ಘರ್ಷಣೆಯಲ್ಲಿ ರಕ್ತಪಾತಕ್ಕೆ ಅವಕಾಶವಿರಬಹುದು. ಆದರೆ ಸಂಘರ್ಷ ಎಂಬಲ್ಲಿ ಮೌಲ್ಯ ಜಗತ್ತಿಗೆ ಸಂಬಂಧಪಟ್ಟ ಮುಖಾಮುಖಿಯಾಗದೆ. ಇದೊಂದು ತಾತ್ವಿಕ ಚೌಕಟ್ಟಿನಲ್ಲಿ ನಡೆಯುವ ಘರ್ಷಣೆ ಎಂದು ಹೇಳಬಹುದು.

## ತಲೆಮಾರು ಸಂಘರ್ಷಕ್ಕೆ ಕಾರಣಗಳು

ವಿಭಿನ್ನ ವಯೋಮಾನದ ಜನರು ಒಂದು ಕಡೆ ವಾಸಿಸುತ್ತಾರೆ. ವಯಸ್ಸಿಗನುಗುಣವಾಗಿ ವ್ಯಕ್ತಿಯ ಮನಸ್ಥಿತಿಯೂ ಸಹ ಬದಲಾಗುತ್ತದೆ. ಕುಟುಂಬವೊಂದರಲ್ಲಿ ವಿಭಿನ್ನ ವಯೋಮಾನದವರು ಇರುವುದರಿಂದ ಒಂದೊಂದು ತಲೆಮಾರಿನವರ ಮಾನಸಿಕ ಸ್ಥಿತಿಯೂ ವಿಭಿನ್ನವಾಗಿರುತ್ತದೆ. ಇದು ತಲೆಮಾರು ಸಂಘರ್ಷಕ್ಕೆ ಪ್ರಮುಖ ಕಾರಣ. ಬೇರೆ ಬೇರೆ ತಲೆಮಾರುಗಳ ಜನರ ಆಸಕ್ತಿ ಅಭಿರುಚಿಗಳು ವಿಭಿನ್ನವಾಗಿರುತ್ತವೆ. ಇದು ಕೂಡ ತಲೆಮಾರು ಸಂಘರ್ಷಕ್ಕೆ ಕಾರಣವಾಗಬಹುದು.

ಪ್ರತಿಯೊಬ್ಬರೂ ತಮ್ಮ ಅಸ್ತಿತ್ವಕ್ಕಾಗಿ ಹೋರಾಡುತ್ತಾರೆ. ಕುಟುಂಬದಲ್ಲಿ ಹಲವು ಜನರು ಇದ್ದಾಗ ಹಿರಿಯ ತಲೆಮಾರಿನವರ ಪ್ರಭಾವ ಅಲ್ಲಿ ಹೆಚ್ಚಾಗಿರುತ್ತದೆ. ಆಗ ಅನಿವಾರ್ಯವಾಗಿ ಕಿರಿಯ ತಲೆಮಾರಿನವರ ಅಸ್ತಿತ್ವದ ಪ್ರಶ್ನೆ ಎದುರಾಗುತ್ತದೆ. ಇದರಿಂದಲೂ ತಲೆಮಾರು ಸಂಘರ್ಷ ಅನಿವಾರ್ಯ.

ಹಿರಿಯ ತಲೆಮಾರಿನವರು ಕಿರಿಯ ತಲೆಮಾರಿನವರನ್ನು ನಿಯಂತ್ರಿಸುತ್ತಿರುತ್ತಾರೆ. ಕುಟುಂಬದಲ್ಲಿನ ಅಧಿಕಾರವು ಸಾಮಾನ್ಯವಾಗಿ ಹಿರಿಯ ತಲೆಮಾರಿನವರಲ್ಲಿ ಕೇಂದ್ರೀಕೃತವಾಗಿರುತ್ತದೆ. ಇದರಿಂದ ಕಿರಿಯ

ತಲೆಮಾರಿನ ಜನರ ಸ್ವಾತಂತ್ರ್ಯಕ್ಕೆ ಧಕ್ಕೆಯಾಗುತ್ತದೆ. ಅವರು ಕುಟುಂಬದಲ್ಲಿ ಸ್ವಾತಂತ್ರ್ಯವನ್ನು ಬಯಸುವುದರಿಂದ ಸಂಘರ್ಷ ಅನಿವಾರ್ಯವಾಗುತ್ತದೆ.

ಕುಟುಂಬದಲ್ಲಿ ಹದಿಹರೆಯ ತಲುಪಿದ ನಂತರ ಕಿರಿಯ ತಲೆಮಾರಿನವರು ಸ್ವಾವಲಂಬನೆಯನ್ನು ಹೊಂದುವ ಮನೋಭಾವದವರಾಗಿರುತ್ತಾರೆ. ಆದರೆ ಇಂದು ಸ್ವಾವಲಂಬನೆಯು ಬೇಗ ದೊರೆಯುವುದಿಲ್ಲ. ಕಿರಿಯ ತಲೆಮಾರಿನವರು ಅನೇಕ ಕಾರಣಗಳಿಂದ ಹಿರಿಯ ತಲೆಮಾರಿನವರ ಆಶ್ರಯದಲ್ಲಿಯೇ ಬದುಕಬೇಕಾಗುತ್ತದೆ.

ಬ್ರಿಟಿಷರು ಭಾರತವನ್ನು ವಸಾಹತುವಾಗಿ ಆಳ್ವಿಕೆ ನಡೆಸಿದ ಮೇಲೆ, ಭಾರತೀಯ ಸಮಾಜದಲ್ಲಿಯೂ ಸಾಕಷ್ಟು ಸ್ಥಿತ್ಯಂತರಗಳಾದವು. ಇಂಗ್ಲೀಷ್ ಶಿಕ್ಷಣ ಕ್ರಮ ಜಾರಿಗೆ ಬಂದಿತು. ಕೈಗಾರಿಕೆಗಳು ಸ್ಥಾಪನೆಗೊಂಡವು. ಇದರಿಂದ ನಗರಗಳು ಬೆಳೆಯತೊಡಗಿದವು. ಗ್ರಾಮೀಣ ಜನರು ನಗರ ಪ್ರದೇಶಗಳಿಗೆ ವಲಸೆ ಬರಲಾರಂಭಿಸಿದರು. ಇದರಿಂದ ನಗರಗಳಲ್ಲಿ ಹೊಸದೊಂದು ಮಧ್ಯಮವರ್ಗ ಸೃಷ್ಟಿಯಾಯಿತು. ಇಂಗ್ಲೀಷ್ ಶಿಕ್ಷಣ ಕ್ರಮದಿಂದ ಆಧುನಿಕ ವಿಚಾರಗಳು ಮಧ್ಯಮವರ್ಗಕ್ಕೆ ತಲುಪಿದವು. ಇದರಿಂದ ನಗರದ ಮಧ್ಯಮವರ್ಗದ ಜೀವನದ ದೃಷ್ಟಿಕೋನವೇ ಬದಲಾಯಿತು. ಇದರಿಂದ ವ್ಯಕ್ತಿವಾದವು ಪ್ರಾಧಾನ್ಯತೆ ಪಡೆಯಿತು. ಕೂಡು ಕುಟುಂಬದ ಮೌಲ್ಯಗಳು ಭಗ್ನಗೊಂಡವು. ಸಮೂಹಕ್ಕಿಂತ ವ್ಯಕ್ತಿಯು ಮುಖ್ಯವಾದುದರಿಂದ ನಗರ ಪರಿಸರವು ವ್ಯಕ್ತಿ ವೈಶಿಷ್ಟ್ಯತೆಯನ್ನು ರೂಪಿಸಿತು. ತಾನು ಯಾರಿಗಿಂತಲೂ, ಯಾವುದಕ್ಕಿಂತಲೂ ಕಡಿಮೆಯಲ್ಲ ಎನ್ನುವ ಅಹಂ ಕೇಂದ್ರೀಕೃತ ಪ್ರಜ್ಞೆಯು ಆಧುನಿಕತೆಯ ಸಂಪರ್ಕ ಪಡೆದ ಯುವ ಸಮುದಾಯದಲ್ಲಿ ಬೆಳೆದರೆ, ಹಿರಿಯ ತಲೆಮಾರಿನವರು ಆಧುನಿಕ ಮೌಲ್ಯಗಳೊಡನೆ ಸಂಪರ್ಕ ಪಡೆಯದೆ ಸಾಂಪ್ರದಾಯಿಕ ಮೌಲ್ಯಗಳಲ್ಲಿಯೇ ಉಳಿದುಕೊಂಡರು. ಈ ಎರಡು ಬಗೆಯ ಮೌಲ್ಯಗಳನ್ನು ಹೊಂದಿರುವ ಜನರು ಕುಟುಂಬನಲ್ಲಿದ್ದುದರಿಂದ ತಲೆಮಾರು ಸಂಘರ್ಷಗಳು ಅನಿವಾರ್ಯವಾಗಿ ಹುಟ್ಟಿಕೊಂಡವು.

ಸನೂಜದಲ್ಲಿನ ಜನರು ನಾಗರಿಕತೆ ಅಥವಾ ನೈತಿಕ ನೀತಿನಿಯಮಗಳ ಹೆಸರಿನಲ್ಲಿ ಪ್ರಕೃತಿನಿಯಮ ದೊಂದಿಗೆ ಸಂಘರ್ಷಕ್ಕಿಳಿದಿದ್ದಾರೆ. ಇದು ಕೂಡ ಕುಟುಂಬದಲ್ಲಿನ ತಲೆಮಾರು ಸಂಘರ್ಷಕ್ಕೆ ಕಾರಣವಾಗಿದೆ. ಮನುಷ್ಯನು ತನ್ನ ವೈಚಾರಿಕತೆ, ಜ್ಞಾಪಕಶಕ್ತಿ, ಬೌದ್ಧಿಕತೆಗಳ ಸಹಾಯದಿಂದ ಸೃಷ್ಟಿಯಲ್ಲಿ ವಿಶಿಷ್ಟವಾದ ಜೀವಿ. ಇದರೊಂದಿಗೆ ತನ್ನದೇ ಆದ ಕೆಲವು ಕಟ್ಟುಪಾಡು, ನೈತಿಕ ನಿಯಮಗಳಡಿಯಲ್ಲಿ ಒಂದು ವ್ಯವಸ್ಥೆಯನ್ನು ಮಾಡಿಕೊಂಡಿದ್ದಾನೆ. ಇದು ಪ್ರಕೃತಿ ನಿಯಮಗಳೊಡನೆ ವೈರುಧ್ಯ ಹೊಂದಿರುವುದರಿಂದ ತಲೆಮಾರು ಸಂಘರ್ಷವು ಉಂಟಾಗುತ್ತದೆ.

## ತಲೆಮಾರು ಸಂಘರ್ಷಗಳ ವರ್ಗೀಕರಣ

ಕುಟುಂಬದಲ್ಲಿ ನಡೆಯುವ ತಲೆಮಾರು ಸಂಘರ್ಷವನ್ನು ವಿಭಾಗ ಮಾಡುವುದು ಕಷ್ಟದ ಕೆಲಸ. ಹಾಗೆ ಮಾಡಿದರೆ ಸರಳೀಕರಣವಾಗುತ್ತದೆ. ಏಕೆಂದರೆ ತಲೆಮಾರು ಸಂಘರ್ಷಕ್ಕೆ ಕಾರಣ, ಉದ್ದೇಶಗಳು

ವಿಭಿನ್ನವಾಗಿರುತ್ತವೆ. ಸಂಕೀರ್ಣವಾಗಿರುತ್ತವೆ. ಒಂದಕ್ಕೊಂದು ತಗುಲಿಕೊಂಡಿರುತ್ತವೆ. ಅಧ್ಯಯನದ ಅನುಕೂಲಕ್ಕೆ ಈ ಕೆಳಕಂಡಂತೆ ತಲೆಮಾರು ಸಂಘರ್ಷದ ವಿಧಗಳನ್ನು ಗುರ್ತಿಸಬಹುದು.

ವಯೋಮಾನದ ಆಧಾರ ಮೇಲೆ

೧. ಒಂದು ತಲೆಮಾರುಗಳ ನಡುವಿನ ತಲೆಮಾರು ಸಂಘರ್ಷ.

೨. ಎರಡು ತಲೆಮಾರುಗಳು ನಡುವಿನ ತಲೆಮಾರು ಸಂಘರ್ಷ

ಇಲ್ಲಿ ಮೊದಲನೆಯ ವಿಧದಲ್ಲಿ ತಂದೆ, ತಾಯಿ, ಅತ್ತೆ, ಮಾವ ಮತ್ತು ಮಗ, ಮಗಳು, ಸೊಸೆ, ಅಳಿಯಂದಿರ ನಡುವೆ ನಡೆಯುತ್ತದೆ. ಎರಡನೆಯದು ಅಜ್ಜ-ಅಜ್ಜಿ ಮತ್ತು ಮೊಮ್ಮಕ್ಕಳ ನಡುವೆ ನಡೆಯುತ್ತದೆ.

ಮನುಷ್ಯನ ಸಂಬಂಧಗಳ ಆಧಾರದ ಮೇಲೆ,

ತಂದೆ-ಮಗ, ತಂದೆ-ಮಗಳು, ತಾಯಿ-ಮಗಳು, ಅತ್ತೆ-ಸೊಸೆ ಇನ್ನು ಮುಂತಾದ ವಿಭಾಗ ಕ್ರಮಗಳನ್ನು ಸಂಬಂಧಗಳ ಆಧಾರದ ಮೇಲೆ ಮಾಡಬಹುದು.

ಇದಲ್ಲದೆ ತಲೆಮಾರು ಸಂಘರ್ಷವನ್ನು ಮತ್ತೊಂದು ವಿಧವಾಗಿ ವಿಭಾಗ ಮಾಡಬಹುದು.

೧. ಕೌಟುಂಬಿಕ ತಲೆಮಾರು ಸಂಘರ್ಷ.

೨. ಸಾರ್ವಜನಿಕ ಬದುಕಿನ ತಲೆಮಾರು ಸಂಘರ್ಷ.

ಒಂದು ತಲೆಮಾರು ಮತ್ತು ಎರಡು ತಲೆಮಾರುಗಳ ನಡುವಿನ ಸಂಘರ್ಷವನ್ನು ಕುರಿತು ವಿವೇಚಿಸುವುದಾದರೆ, ಸಾಮಾನ್ಯವಾಗಿ ನಮ್ಮ ಗ್ರಹಿಕೆಗೆ ಬರುವಂತೆ, ಎರಡು ತಲೆಮಾರುಗಳ ನಡುವಿನ ಸಂಘರ್ಷಕ್ಕಿಂತ ಒಂದು ತಲೆಮಾರುಗಳ ನಡುವೆ ನಡೆಯುವ ಸಂಘರ್ಷವು ತೀವ್ರವಾಗಿರುತ್ತದೆ. ನಾವು ಮೊದಲೇ ನೋಡಿದಂತೆ ಎರಡು ತಲೆಮಾರುಗಳ ನಡುವಿನ ಸಂಘರ್ಷವು ಅಜ್ಜ-ಅಜ್ಜಿ ಮತ್ತು ಮೊಮ್ಮಕ್ಕಳ ನಡುವೆ ನಡೆಯುವಂತಹುದು. ಒಂದು ತಲೆಮಾರುಗಳ ನಡುವೆ ನಡೆಯುವ ಸಂಘರ್ಷಕ್ಕೆ ಹೋಲಿಸಿದಲ್ಲಿ ಇದರ ತೀವ್ರತೆಯು ಕಡಿಮೆ ಇದೆ. ಒಂದು ಕುಟುಂಬದಲ್ಲಿನ ಅಜ್ಜ-ಅಜ್ಜಿಯವರು ಬದುಕಿನ ಅಂಚಿನಲ್ಲಿರುವರು. ಹಾಗೆಯೇ ಕುಟುಂಬವೊಂದರಲ್ಲಿನ ಮೊಮ್ಮಕ್ಕಳು ಬದುಕಿನ ಪ್ರಥಮ ಹಂತದಲ್ಲಿರುತ್ತಾರೆ. ಒಬ್ಬರಲ್ಲಿ ಅನುಭವಗಳು ಪಕ್ವಗೊಂಡಿದ್ದರೆ, ಮತ್ತೊಬ್ಬರಲ್ಲಿ ಅನುಭವಗಳ ಕೊರತೆ ಕಂಡುಬರುತ್ತದೆ. ಆದ್ದರಿಂದ ಇಲ್ಲಿ ಸಂಘರ್ಷಗಳು ಕಡಿಮೆ ಪ್ರಮಾಣದಲ್ಲಿರುತ್ತವೆ. ಕುಟುಂಬದಲ್ಲಿನ ವೃದ್ಧರು, ಮಕ್ಕಳ ಮಾನಸಿಕ ಸ್ಥಿತಿಗಳಲ್ಲಿಯೂ ಹೊಂದಾಣಿಕೆ ಕಂಡುಬರುತ್ತದೆ. ಸಾಕಷ್ಟು ಅನುಭವಗಳಿಂದ ಪಕ್ವಗೊಂಡಿರುವ ವೃದ್ಧರ ದೇಹವು ಬಲಹೀನ ಸ್ಥಿತಿಯನ್ನು ತಲುಪಿರುತ್ತದೆ. ಬದುಕಿನ ಅಂಚಿನಲ್ಲಿರುವ ಅವರ ಮನಸ್ಸು ಒಂದು ಬಗೆಯ ಸಹನೆಯ ಸ್ಥಿತಿಯನ್ನು ತಲುಪಿರುತ್ತದೆ. ಮಕ್ಕಳ ಮುಗ್ಧತೆ ಸಹಜ ನಡವಳಿಕೆಗಳು ಕುಟುಂಬದಲ್ಲಿನ ವೃದ್ಧರಿಗೆ ಪ್ರಿಯವಾಗಿರುತ್ತವೆ.

ಬದುಕಿನ ಅಂಚಿನಲ್ಲಿರುವ ಅವರಿಗೆ ಬೇಕಾದ ಪ್ರೀತಿ, ಒಡನಾಟಗಳು ಮೊಮ್ಮಕ್ಕಳಿಂದ ದೊರೆಯುತ್ತದೆ. ಕುಟುಂಬದಲ್ಲಿ ಇವರಿಬ್ಬರ ಪಾತ್ರದಲ್ಲಿಯೂ ಹೋಲಿಕೆಯಿದೆ. ವೃದ್ಧರು ಕೌಟುಂಬಿಕ ಜವಾಬ್ದಾರಿಯಿಂದ ನಿವೃತ್ತರಾಗಿದ್ದರೆ, ಮೊಮ್ಮಕ್ಕಳಿಗೆ ಯಾವ ರೀತಿಯ ಕೌಟುಂಬಿಕ ಜವಾಬ್ದಾರಿಯೂ ಇರುವುದಿಲ್ಲ. ಆದರೆ ಬಾಲ್ಯದ ಹಂತದಿಂದ ಯೌವನಾವಸ್ಥೆಯನ್ನು ತಲುಪಿದ ಮೊಮ್ಮಕ್ಕಳು ಮತ್ತು ಅಜ್ಜ-ಅಜ್ಜಿಯರ ನಡುವೆ ಸಂಘರ್ಷಗಳು ತಲೆದೋರುತ್ತವೆ. ಯುವ ತಲೆಮಾರಿನ ಮಾನಸಿಕ ಸ್ಥಿತಿಗಳಿಗೆ ವೃದ್ಧರ ಮಾನಸಿಕ ಸ್ಥಿತಿಯು ಹೊಂದಾಣಿಕೆಯಾಗದಿರುವುದರಿಂದ ಸಂಘರ್ಷಗಳು ಈ ಹಂತದಲ್ಲಿ ಆರಂಭವಾಗುತ್ತವೆ.

ಎರಡು ತಲೆಮಾರುಗಳ ಸಂಘರ್ಷಕ್ಕಿಂತ ಒಂದು ತಲೆಮಾರುಗಳ ಸಂಘರ್ಷವು ಸ್ವಲ್ಪ ಭಿನ್ನವಾದದ್ದು, ತೀವ್ರವಾದದ್ದು. ಇದರಲ್ಲಿ ಕುಟುಂಬದಲ್ಲಿನ ಅಧಿಕಾರವು ಸಾಮಾನ್ಯವಾಗಿ ಹಿರಿಯ ತಲೆಮಾರಿನವರಲ್ಲಿ ಕೇಂದ್ರೀಕೃತಗೊಂಡಿರುತ್ತದೆ. ಹಿರಿತನವೂ ನಮ್ಮ ಕುಟುಂಬ ವ್ಯವಸ್ಥೆಯಲ್ಲಿ ಒಂದು ಅಧಿಕಾರ ಕೇಂದ್ರವಾಗಿದೆ. ಆದರೆ ಕೌಟುಂಬಿಕ ಜವಾಬ್ದಾರಿಯನ್ನು ಹೊರುವ ಸಾಮರ್ಥ್ಯವಿದ್ದರೂ ಸಹ ಕಿರಿಯ ತಲೆಮಾರಿನವರು ಅದರಿಂದ ವಂಚಿತರಾಗಿರುತ್ತಾರೆ. ಕುಟುಂಬದಲ್ಲಿ ಹಿರಿಯರು ಕಿರಿಯರ ಮೇಲೆ ನಿಯಂತ್ರಣ ಮತ್ತು ನಿರ್ಬಂಧಗಳನ್ನು ಹೇರುವ ಪ್ರಯತ್ನದಲ್ಲಿರುತ್ತಾರೆ. ಆದರೆ ಜೀವನದ ಉತ್ಸಾಹದಲ್ಲಿರುವ ಕಿರಿಯ ಸಮುದಾಯ ಹಿರಿಯ ಸದಸ್ಯರ ಅಧಿಕಾರ, ನಿಯಂತ್ರಣ ಮತ್ತು ನಿರ್ಬಂಧಗಳನ್ನು ಪ್ರತಿರೋಧಿಸುತ್ತದೆ. ಕೆಲವು ಸಮಯ ತಂದೆ-ತಾಯಿಗಳು ಹೆಚ್ಚಿನ ಕೌಟುಂಬಿಕ ಜವಾಬ್ದಾರಿಯಿಂದ ತಮ್ಮ ಮಕ್ಕಳಿಗೆ ಪ್ರೀತಿ-ವಾತ್ಸಲ್ಯ ತೋರದಿರಬಹುದು. ಈ ರೀತಿಯ ಭಾವನಾತ್ಮಕತೆಯ ಕೊರತೆ, ಒಬ್ಬರು ಮತ್ತೊಬ್ಬರನ್ನು ಸರಿಯಾಗಿ ಅರ್ಥಮಾಡಿಕೊಳ್ಳದಿರುವುದು ಮುಂತಾದ ಕಾರಣಗಳಿಂದ ಒಂದು ತಲೆಮಾರುಗಳ ನಡುವಿನ ಸಂಘರ್ಷವು ತೀವ್ರವಾಗಿರುವ ಸಾಧ್ಯತೆಯಿದೆ.

ತಲೆಮಾರುಗಳ ಸಂಘರ್ಷಗಳ ಎರಡನೆಯ ವರ್ಗೀಕರಣವು ಮನುಷ್ಯನ ಸಂಬಂಧಗಳನ್ನು ಆಧರಿಸಿದ್ದು, ಇಲ್ಲಿ ಸಾಮಾನ್ಯವಾಗಿ ಪ್ರತಿಯೊಂದು ಮಾನವ ಸಂಬಂಧಗಳಲ್ಲಿ ಇದು ಭಿನ್ನತೆಯನ್ನು ಹೊಂದಿದೆ. ತಾಯಿ-ಮಗ, ತಾಯಿ-ಮಗಳು ಇವರ ನಡುವೆ ನಡೆಯುವ ಸಂಘರ್ಷಕ್ಕಿಂತ ತಂದೆ-ಮಗ-ಇವರ ನಡುವೆ ನಡೆಯುವ ಸಂಘರ್ಷವು ಭಿನ್ನ ಸ್ವರೂಪವನ್ನು ಹೊಂದಿದ್ದು, ತೀವ್ರವಾಗಿದೆ. ಇದಕ್ಕೆ ಕಾರಣಗಳನ್ನು ಮುಂದೆ ಕಾದಂಬರಿಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ವಿಶ್ಲೇಷಿಸಲಾಗಿದೆ. ಆದರೂ ಭೌತಿಕ ಸಾಮೀಪ್ಯ, ಲಿಂಗಭಿನ್ನತೆ, ಕುಟುಂಬದ ಅಧಿಕಾರ, ಸದಸ್ಯರ ನಡುವೆ ಭಾವನಾತ್ಮಕತೆಯ ಮಟ್ಟ ಇವುಗಳು ಸಂಘರ್ಷದ ಭಿನ್ನತೆಗೆ ಕಾರಣಗಳೆಂದು ಗುರುತಿಸಬಹುದು.

ತಲೆಮಾರು ಸಂಘರ್ಷದ ಎರಡನೆಯ ವರ್ಗೀಕರಣವು ವ್ಯಾಪ್ತಿಯಲ್ಲಿ ಸಂಕುಚಿತತೆಯನ್ನು ಹೊಂದಿರುವುದರಿಂದ ಮತ್ತೊಂದು ವಿಭಾಗಕ್ರಮವನ್ನು ಅಧ್ಯಯನದ ದೃಷ್ಟಿಯಿಂದ ಮಾಡಲಾಗಿದೆ. ಈ ಮೇಲಿನ ಮೊದಲೆರಡು ವರ್ಗೀಕರಣಗಳು ತಲೆಮಾರು ಸಂಘರ್ಷವನ್ನು ಕುಟುಂಬದ ವ್ಯಾಪ್ತಿಗೆ ಮಾತ್ರ ಸೀಮಿತಗೊಳಿಸುವುದರಿಂದ

ಸಹಜವಾಗಿಯೇ ಒಂದು ಪ್ರಶ್ನೆಯೇಳುತ್ತದೆ. ಹಾಗಾದರೆ ಕುಟುಂಬದ ಹೊರಗಡೆ(ಸಮಾಜದಲ್ಲಿ) ತಲೆಮಾರು ಸಂಘರ್ಷವು ಏರ್ಪಡುವುದಿಲ್ಲವೇ? ಹೌದು. ಸಮಾಜದಲ್ಲಿಯೂ ಕೂಡ ತಲೆಮಾರು ಸಂಘರ್ಷಗಳು ನಡೆಯುತ್ತವೆ. ಕೌಟುಂಬಿಕ ತಲೆಮಾರು ಸಂಘರ್ಷಗಳಿಗೆ ಹೋಲಿಸಿದಲ್ಲಿ ಕುಟುಂಬೇತರ ತಲೆಮಾರು ಸಂಘರ್ಷಗಳು ಕಡಿಮೆ ಪ್ರಮಾಣದಲ್ಲಿ ಜರುಗುತ್ತವೆ. ಇದಕ್ಕೆ ಉದಾಹರಣೆಯಾಗಿ ಶಿಕ್ಷಕ ಮತ್ತು ವಿದ್ಯಾರ್ಥಿಗಳ ನಡುವೆ ನಡೆಯುವ ಸಂಘರ್ಷವನ್ನು ನೀಡಬಹುದು.

ಈ ಮೇಲಿನ ಮೂರು ವರ್ಗೀಕರಣಗಳೇ ಅಂತಿಮವಲ್ಲ. ಬೇರೆ ಬೇರೆ ಕಾರಣಗಳ ಆಧಾರದ ಮೇಲೆ ತಲೆಮಾರು ಸಂಘರ್ಷವನ್ನು ಇನ್ನು ಹಲವು ವಿಧಗಳಾಗಿ ವಿಭಾಗ ಮಾಡಲು ಸಾಧ್ಯತೆಯಿದೆ. ಮೇಲಿನ ಮೂರು ವರ್ಗೀಕರಣಗಳು ಸಂಪೂರ್ಣವಾಗಿ ಪ್ರತ್ಯೇಕಗೊಂಡಿಲ್ಲ. ಪ್ರತಿಯೊಂದು ವಿಭಾಗಕ್ರಮವೂ ಒಂದರೊಡನೊಂದು ಅಂತರ್‌ಸಂಬಂಧ ಹೊಂದಿವೆ.

### ಕಾದಂಬರಿಗಳಲ್ಲಿ ತಲೆಮಾರು ಸಂಘರ್ಷದ ಸ್ವರೂಪ

ಕುಸುಮಾಕರರ ಕಾದಂಬರಿಗಳಲ್ಲಿ ತಲೆಮಾರು ಸಂಘರ್ಷವು ಪ್ರಮುಖ ಆಶಯವಾಗಿ ಮೂಡಿಬಂದಿದೆ. ಬೇರೆ ಬೇರೆ ರೀತಿಯ ತಲೆಮಾರು ಸಂಘರ್ಷಗಳನ್ನು ಅವರ ಕಾದಂಬರಿಗಳಲ್ಲಿ ಕಾಣಬಹುದು. ಕುಸುಮಾಕರರ ಕಾದಂಬರಿಗಳಲ್ಲಿನ ತಲೆಮಾರು ಸಂಘರ್ಷದ ಸ್ವರೂಪವನ್ನು ಕುರಿತು ಚರ್ಚಿಸಬಹುದು. ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಇವರ ಎಲ್ಲಾ ಕಾದಂಬರಿಗಳಲ್ಲಿಯೂ ತಲೆಮಾರು ಸಂಘರ್ಷವು ಪ್ರಧಾನವಾಗಿ ಚಿತ್ರಣಗೊಂಡಿದೆ.

ಬ್ರಿಟಿಷರ ವಸಾಹತುಶಾಹಿ ಆಳ್ವಿಕೆಯಿಂದ ಭಾರತಕ್ಕೆ ಇಂಗ್ಲೀಷ್ ಶಿಕ್ಷಣ ಕಾಲಿಟ್ಟಿತ್ತು. ಇದರಿಂದ ಜನರಲ್ಲಿ ವೈಚಾರಿಕತೆಯು ಬೆಳೆದು ಯುವ ಸಮುದಾಯದಲ್ಲಿ ತಮ್ಮ ಹಕ್ಕುಗಳ ಪ್ರಜ್ಞೆ ಜಾಗೃತಗೊಂಡಿತು. ದೇಶವು ಉದ್ಯಮೀಕರಣದಲ್ಲಿ ಬೆಳವಣಿಗೆ ಹೊಂದಿದಂತೆ ನಗರಗಳು ಬೆಳೆಯ ತೊಡಗಿದವು. ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಪರಿವರ್ತನೆ ಹೊಂದಿದವು. ಸ್ವಾತಂತ್ರ್ಯಾನಂತರದಲ್ಲಿ ಆರ್ಥಿಕ ಯೋಜನೆಗಳನ್ನು ಜಾರಿಗೆ ತರುವುದರ ಮೂಲಕ ದೇಶದ ಆರ್ಥಿಕಾಭಿವೃದ್ಧಿಗೆ ಬೃಹತ್ ಪ್ರಯತ್ನ ಮಾಡಲಾಯಿತು. ಇದರಿಂದ ಜನರ ಜೀವನ ಮಟ್ಟದಲ್ಲಿಯೂ ಸುಧಾರಣೆಯಾಗಿ ನಗರ ಪರಿಸರದ ಮಧ್ಯಮವರ್ಗದ ಜನತೆಯ ಜೀವನದ ದೃಷ್ಟಿಕೋನಗಳು ಬದಲಾವಣೆ ಹೊಂದಿದವು. ಅವರು ತಮ್ಮ ಹಕ್ಕುಗಳಿಗಾಗಿ ಕುಟುಂಬದಲ್ಲಿ ತಮ್ಮ ಅಸ್ತಿತ್ವಕ್ಕಾಗಿ ಸಂಘರ್ಷಗಳನ್ನು ಹೂಡಬೇಕಾಯಿತು. ನಗರ ಪರಿಸರಕ್ಕನುಗುಣವಾಗಿ ಅವರ ಪ್ರಜ್ಞೆಯು ವಿಕಾಸವಾದುದೇ ಈ ರೀತಿಯ ಸಂಘರ್ಷಕ್ಕೆ ಕಾರಣ. ಜೊತೆಗೆ ವಿಭಕ್ತ ಕುಟುಂಬಗಳು ಹುಟ್ಟಿಕೊಂಡಿದ್ದರಿಂದ ಕುಟುಂಬದಲ್ಲಿನ ಸದಸ್ಯರ ಸಂಖ್ಯೆ ಕಡಿಮೆಯಾಗಿ ಒಂಟಿತನ, ಅನಾಥಪ್ರಜ್ಞೆ ಜನರಲ್ಲಿ ಮೂಡಿದವು. ಹೆಚ್ಚಿನ ಕೆಲಸಗಳ ಒತ್ತಡ, ಆರ್ಥಿಕ ಸಂಕಷ್ಟದ ಪರಿಣಾಮವಾಗಿ ಕುಟುಂಬದಲ್ಲಿ ಭಾವನಾತ್ಮಕತೆ, ಪ್ರೀತಿ-ವಿಶ್ವಾಸಗಳು ಕಣ್ಮರೆಯಾಗತೊಡಗಿದವು. ಇಂದಿನ ದಿನಗಳಲ್ಲಿ ಸಾಮಾನ್ಯವಾಗಿ ಪ್ರತಿಯೊಂದು ಕುಟುಂಬಗಳಲ್ಲಿಯೂ

ತಲೆಮಾರು ಸಂಘರ್ಷವನ್ನು ಕಾಣಬಹುದು. ಇದು ಸಾಮಾಜಿಕವಾಸ್ತವವಾಗಿ ಎಲ್ಲರ ಗಮನಸೆಳೆಯುವ ಅಂಶವಾಗಿರುವುದರಿಂದ, ಕುಸುಮಾಕರರ ಕಾದಂಬರಿಗಳಲ್ಲಿ ತಲೆಮಾರು ಸಂಘರ್ಷವು ಒಂದು ಪ್ರಧಾನ ಆಶಯವಾಗಿ ಮೂಡಿ ಬಂದಿದೆ. ಜೊತೆಗೆ ಎಲ್ಲಾ ನವ್ಯಲೇಖಕರನ್ನು ಕಾಡುವ ಮುಖ್ಯ ವಿಷಯವಾಗಿದೆ. ಕಾರಣ ವ್ಯಕ್ತಿವಿಶಿಷ್ಟ ಮೌಲ್ಯಗಳನ್ನು ಸಾಂಪ್ರದಾಯಿಕ ಮೌಲ್ಯಗಳೊಡನೆ ಮುಖಾಮುಖಿಯಾಗಿಸಿ, ಹೊಸ ಮೌಲ್ಯಗಳ ಅನ್ವೇಷಣಾ ಪ್ರವೃತ್ತಿಯನ್ನು ನವ್ಯದ ಎಲ್ಲಾ ಬರಗಾರರಲ್ಲಿಯೂ ಕಾಣಬಹುದು.

ಕುಸುಮಾಕರರ ಆರಂಭದ ಕಾದಂಬರಿಯಾದ 'ಮುಗಿಯದ ಕತೆ'ಯಿಂದ ಹಿಡಿದು ಇತ್ತೀಚಿನ ಕಾದಂಬರಿಯಾದ 'ಬಯಲು-ಬಸಿರು' ಕಾದಂಬರಿಯವರೆಗೂ ತಲೆಮಾರು ಸಂಘರ್ಷವು ಪ್ರಧಾನ ಆಶಯ ವಾಗಿಯೇ ಮೂಡಿಬಂದಿದೆ.

'ಮುಗಿಯದ ಕತೆ'ಯಲ್ಲಿ ತಂದೆ-ಮಗ, ದೇಶಪಾಂಡೆ-ವಿದ್ಯಾರ್ಥಿಗಳು, ತಂದೆ-ಮಗಳು, ತಾಯಿ-ಮಗಳು ಇವರ ನಡುವೆ ಸಂಘರ್ಷವನ್ನು ಕಾಣಬಹುದು. 'ಮುಗಿಯದ ಕತೆ'ಯಲ್ಲಿ ತಂದೆ-ಮಗ 'ಇವರ ನಡುವಿನ ಸಂಘರ್ಷವು ಕಾದಂಬರಿಯ ಪ್ರಾರಂಭದಲ್ಲಿಯೇ ಕಂಡುಬರುತ್ತದೆ. ನಂತರದ ಈ ಎಲ್ಲಾ ಕಾದಂಬರಿಗಳಲ್ಲಿ ಪಡೆದಿರುವ ತೀವ್ರತೆಯು ಇಲ್ಲಿಯ ಸಂಘರ್ಷದಲ್ಲಿಲ್ಲ. ಈ ಕಾದಂಬರಿಯ ಹೊರತಾಗಿ ಬೇರೆ ಯಾವ ಕಾದಂಬರಿಗಳಲ್ಲಿಯೂ ತಂದೆ-ಮಗ ಮುಖಾ-ಮುಖಿಯಾಗುವುದೇ ಇಲ್ಲ. ಆದರೆ ದೇಶಪಾಂಡೆ ಮತ್ತು ಅವನ ತಂದೆ ಮುಖಾಮುಖಿ ಮಾತನಾಡುತ್ತಾರೆ. ಇದನ್ನು ಕಾದಂಬರಿಯ ಭಾಷೆಯಲ್ಲಿಯೇ ನೋಡುವುದಾದರೆ,

> "ಪಾಟೀಲನಿಗೂ ಡಾಕ್ಟರನಾಗಬೇಕೆಂಬ ಆಪೇಕ್ಷೆ ತೀವ್ರವಾಗಿತ್ತು. ಅವನು ಸೈನ್ಸ್ ಸೇರಿದ. ದೇಶಪಾಂಡೆನಿಗೂ ಇಂಜಿನಿಯರೊ, ಡಾಕ್ಟರೋ ಆಗಬೇಕೆಂಬ ಆಪೇಕ್ಷೆಯಿತ್ತು. ಅವನು ಸೈನ್ಸಿಗೆ ಸೇರುವ ಹಾಗಿರಲಿಲ್ಲ ಅವನ ಆರ್ಥಿಕ ಪರಿಸ್ಥಿತಿಯ ಮೂಲಕ.
>
> "ಪಾಟೀಲ, ಕುಲಕರ್ಣಿ, ಜೋಶಿ ಎಲ್ಲರೂ ಸೈನ್ಸ್ ಸೇರಿದರು" ಎಂದು ತನ್ನ ತಂದೆಗೆ ತಿಳಿಸಿದ.
>
> "ನಾನಾದರೂ ಏನು ಮಾಡಲಿ, ನನ್ನ ಆರ್ಥಿಕ ಪರಿಸ್ಥಿತಿ ಅವರ ಹಾಗೆ ಇಲ್ಲ" ತಂದೆ ನಿರಾಶೆಯಲ್ಲಿ ಹೇಳಿದರು."[೧]

ಇಲ್ಲಿ ತನ್ನ ಬಯಕೆ ಈಡೇರುತ್ತಿಲ್ಲವಲ್ಲ ಎಂಬ ಅಸಹನೆ ದೇಶಪಾಂಡೆಗಿದೆ. ಅವನ ತಂದೆಯೂ ಕೂಡ ಮಗನಿಗೆ ತನ್ನ ಆರ್ಥಿಕ ಪರಿಸ್ಥಿತಿಯನ್ನು ಮನದಟ್ಟು ಮಾಡಿಕೊಡುತ್ತಿದ್ದಾನೆ. ತನ್ನ ಮಗನ ಆಪೇಕ್ಷೆಗೆ ವಿರುದ್ಧವಾಗಿ ನಡೆಯಬೇಕೆಂಬ ಧೋರಣೆಯಾಗಲೀ, ಅವನ ವೈಯಕ್ತಿಕ ಹಕ್ಕನ್ನು ಧಮನ ಮಾಡಿ ಅವನನ್ನು ನಿಯಂತ್ರಿಸಬೇಕೆಂಬ ಉದ್ಧಟತನವಾಗಲಿ ತಂದೆಗೆ ಇಲ್ಲ. ಆರ್ಥಿಕ ಪರಿಸ್ಥಿತಿಗಳು ದೇಶಪಾಂಡೆಯ ತಂದೆಯನ್ನು ಇಲ್ಲಿ ನಿಯಂತ್ರಿಸುತ್ತಿವೆ. ತಂದೆ-ಮಗನಲ್ಲಿ ಯಾವುದೇ ಬಗೆಯ ಸಂಭೋದನೆಯಿಲ್ಲದ ಸಂಭಾಷಣೆಯಲ್ಲಿ ತಲೆಮಾರು ಸಂಘರ್ಷವು ಅಂತರ್ಗತವಾಗಿರುವುದನ್ನು ಕಾಣಬಹುದು. ಪರಿಸ್ಥಿತಿಯ ಒತ್ತಡವು ಇಲ್ಲಿ

ಪ್ರಧಾನವಾಗಿ ಕಂಡುಬಂದು ತಂದೆ-ಮಗ ಇಬ್ಬರು ಇಲ್ಲಿ ಅಸಾಹಾಯಕರು. ತಮ್ಮ ಪರಿಸ್ಥಿತಿಯ ಒತ್ತಡಗಳು ತಂದೆ-ಮಗ ಇಬ್ಬರಿಗೂ ತಿಳಿದಿರುವುದರಿಂದಲೇ ತಲೆಮಾರು ಸಂಘರ್ಷವು ತೀವ್ರಸ್ವರೂಪವನ್ನು ಪಡೆಯದೆ ಇಲ್ಲಿ ಸೌಮ್ಯರೂಪದಿಂದಿದೆ.

ದೇಶಪಾಂಡೆ ವಿದ್ಯಾರ್ಥಿಯಾಗಿದ್ದು, ಆರ್ಥಿಕವಾಗಿ ಸ್ವಾವಲಂಬನೆಯನ್ನು ಸಾಧಿಸದೆ ಇರುವ ಹಂತದಲ್ಲಿ ತಲೆಮಾರು ಸಂಘರ್ಷವು ಈ ರೀತಿಯಿದ್ದು, ನಂತರ ಉದ್ಯೋಗಕ್ಕೆ ಸೇರಿ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿದ ವೇಳೆ ಇದು ಬೇರೊಂದು ಸ್ವರೂಪವನ್ನು ಪಡೆದುಕೊಳ್ಳುತ್ತದೆ.

> "ಏಕಾಕಿ ಸಾಹಸಿ ಏಕಾಂಗ ವೀರ ಅಲ್ಲವೇ ತಾನು?. ತನ್ನ ತಂದೆ ತನಗಾಗಿ ಏನು ಮಾಡಿದ?. ತನ್ನ ಅಣ್ಣ ಏನು ಮಾಡಿದ?. ಯಾರಿಂದಲೂ ಸಹಾಯ ತೆಗೆದುಕೊಳ್ಳದೆ ತಾನು ಮುಂದೆ ಬಂದವ. ದೇಶಪಾಂಡೆ ಮೊಟ್ಟ ಮೊದಲ ಸಲ ತನ್ನ ಅಹಂಕಾರವನ್ನು ಅನುಭವಿಸಿದ. ಹೌದು, ಶೂನ್ಯದಿಂದ ತನ್ನ ಬದುಕನ್ನು ನಿರ್ಮಿಸಿಕೊಂಡ ತನ್ನನ್ನು ತಾನೇ ಅಭಿನಂದಿಸಿದ."[೨]

ಬಾಲ್ಯದಿಂದ ಯೌವ್ವನಕ್ಕೆ ಬರುವ ಹಂತಕ್ಕೆ ದೇಶಪಾಂಡೆಗೆ ವ್ಯಕ್ತಿವಿಶಿಷ್ಟತಾಮೌಲ್ಯಪ್ರಜ್ಞೆ ವಿಕಾಸ ಹೊಂದಿದೆ. ಎಲ್ಲರ ಸಹಾಯದಿಂದ, ಸಹಕಾರದಿಂದ ತಾನು ಮೇಲೆ ಬಂದೆ ಎಂದು ಒಪ್ಪಿಕೊಂಡರೆ ತನ್ನ ವ್ಯಕ್ತಿತ್ವದ ಅಸ್ತಿತ್ವಕ್ಕೆ ಧಕ್ಕೆ ತಗುಲುತ್ತದೆ. ಎಂಬ ಅಹಂ ಕೇಂದ್ರೀಕೃತ ಪ್ರಜ್ಞೆ ಜಾಗೃತಗೊಂಡಿದೆ. ಸಮಾಜದಲ್ಲಿ ತನಗೆ ಅಸ್ತಿತ್ವ ದೊರೆಯಬೇಕಾದರೆ ತಾನು ಸ್ವಾವಲಂಬಿಯಾಗಿ ಮುಂದೆ ಬಂದಾಗ ಮಾತ್ರ ತನ್ನ ಪ್ರತಿಷ್ಠೆ ಹೆಚ್ಚುತ್ತದೆಂಬ ಮನೋಭಾವವನ್ನು ಅವನ ವ್ಯಕ್ತಿವಿಶಿಷ್ಟತಾ ಮೌಲ್ಯಪ್ರಜ್ಞೆ ಉಂಟುಮಾಡಿದೆ.

'ಮುಗಿಯದ ಕತೆ'ಗೆ ಹೋಲಿಸಿದಲ್ಲಿ 'ನಾಲ್ಕನೆಯ ಆಯಾಮ'ದಲ್ಲಿ ತಲೆಮಾರು ಸಂಘರ್ಷವು ತೀವ್ರಸ್ವರೂಪವನ್ನು ಪಡೆದಿದೆ. ತಂದೆ-ಮಗ ಎಲ್ಲಿಯೂ ಮುಖಾ-ಮುಖಿಯಾಗುವುದಿಲ್ಲ. ಇವರಿಬ್ಬರ ನಡುವಿನ ಸಂಘರ್ಷವು ಕಾದಂಬರಿಯಲ್ಲಿ ತುಂಬಾ ವ್ಯಾಪಕತೆಯನ್ನು ಪಡೆದುಕೊಂಡಿದೆ. ಪ್ರತಿಯೊಂದು ಹಂತದಲ್ಲಿಯೂ ತಂದೆಯ ನಿಲುವುಗಳು ಅವನಿಗೆ ಹಿಡಿಸುವುದೇ ಇಲ್ಲ.

"ಮನೆಗೆ ಹೋಗಿ ತನ್ನ ತಂದೆಗೆ ಕೆನ್ನೆಗಳನ್ನು ತೋರಿಸಿದ್ದರೆ"

"ಅಯ್ಯೋ ತಂದೆಯೆ!"

ತನ್ನ ತಂದೆ-ತಾಯಿಗಳನ್ನು ಕುರಿತು ಅವನಿಗೆ ಎಂದೂ ಇಲ್ಲದ ಜುಗುಪ್ಸೆ ಉಂಟಾಯಿತು.

ಆರಿಸಿಕೊಂಡು ಕಾಳು ತಿನ್ನುವ ಕೋಳಿ
ತಮ್ಮ ನೆರಳಿಗೆ ಅಂಜುವ ಪುಕ್ಕರು

ಅವರಿಂದಲೇ ಅಲ್ಲವೇ ತನ್ನಲ್ಲಿ ಅಪಮಾನವನ್ನು ನುಂಗಿಕೊಳ್ಳುವ ಹೇಡಿತನ ಬಂದದ್ದು.

"ಮಗು ಹೊರಗೆ ಹೋಗಬೇಡ"
"ಅವರೊಡನೆ ಆಡಬೇಡ"

"ಜಗಳ ತೆಗೆಯಬೇಡ" ಅವರೆಲ್ಲಿ? ನಾವೆಲ್ಲಿ?

"ನಿನಗೆ ಎಷ್ಟು ಸಲ ಹೇಳಿಲ್ಲ-ದೊಡ್ಡವರ ಗೊಡವೆ ಬೇಡ ಎಂದು" ಇದೇ ಉಪದೇಶ"[5]

ಇಲ್ಲಿ ಕಥಾನಾಯಕನ ತಂದೆ ಪ್ರತಿಯೊಂದು ಹಂತದಲ್ಲಿಯೂ ಆತನನ್ನು ನಿಯಂತ್ರಿಸುತ್ತಾನೆ. ಮಗನ ಅಭಿಪ್ರಾಯ, ಅಭಿರುಚಿಗಳಿಗೆ ಬೆಲೆಯಿಲ್ಲ. ತಂದೆಯ ಅಧಿಕಾರಶಾಹಿ ನೀತಿ, ನಿಯಂತ್ರಣ ತೋರಿಕೆಗೆ ಕಂಡು ಬರುತ್ತವೆ ನಿಜ. ಆದರೆ ಮಗ ತಂದೆಯ ಧೋರಣೆಯನ್ನು ಟೀಕಿಸುವ ಈ ಮೇಲಿನ ಮಾತುಗಳಲ್ಲಿಯೇ ತಂದೆಯು ಯಾವ ಮಾದರಿಯ ಸಾಮಾಜಿಕ ಮೌಲ್ಯಗಳಿಂದ ನಿಯಂತ್ರಿತನಾಗಿದ್ದಾನೆ ಎಂಬುದು ತಿಳಿಯುತ್ತದೆ. ಸಾಮಾಜಿಕವಾಗಿ ಆರ್ಥಿಕವಾಗಿ ಇವರದು ಸಾಮಾನ್ಯ ಕುಟುಂಬ. ಸಮಾಜದಲ್ಲಿ ಇನ್ನೊಬ್ಬರ ಗೊಡವೆಗೆ ಹೋಗದೆ ತಾವಾಯಿತು, ತಮ್ಮ ಬದುಕು ಎಂಬ ಧೋರಣೆಯುಳ್ಳವರು. "ಮಗು ಹೊರಗೆ ಹೋಗಬೇಡ" ಎಂಬ ಮಾತಿನಲ್ಲಿ ಮಗನ ಬಗ್ಗೆ ತಂದೆಗೆ ಅಪಾರ ಕಾಳಜಿಯಿದೆ. ಮಗ ಹೊರಗಡೆ ಅವಾಂತರಗಳನ್ನು ಸೃಷ್ಟಿಸಿಕೊಂಡು ಬಂದರೆ ಅದನ್ನು ಎದುರಿಸಲಾಗದ ನಿರ್ಬಲರು, ಅಸಹಾಯಕರು ಎಂಬುದು ತಿಳಿಯುತ್ತದೆ. ಆದ್ದರಿಂದ ಈ ಹಿನ್ನೆಲೆಯಲ್ಲಿ ಮಗನನ್ನು ತಂದೆಯು ಪ್ರತಿಯೊಂದು ಹಂತದಲ್ಲಿಯೂ ನಿಯಂತ್ರಿಸುತ್ತಾನೆ. ಕಥಾನಾಯಕನು ರಾಷ್ಟ್ರೀಯ ಸೇವಾ ಯೋಜನೆಗೆ ಸೇರಲು, ಸಿನಿಮಾಕ್ಕೆ ಹೋಗಲು, ಒಳ್ಳೆಯ ಹೇರ್ ಸೆಲೂನ್ ಗೆ ಮಗನನ್ನು ಕಳುಹಿಸಲು ಸ್ನೇಹ ಸಮ್ಮೇಳನಗಳಿಗೆ ಹೋಗಲು ಅನುಮತಿಯನ್ನು ನೀಡದೆ ಅಡ್ಡಿಪಡಿಸುತ್ತಾನೆ. ಇಲ್ಲಿ ತಂದೆಗೆ ಪರಿಸ್ಥಿತಿಯೊಂದಿಗೆ ಹೊಂದಾಣಿಕೆ ಮಾಡಿಕೊಂಡು ತಮ್ಮ ಅಂತಸ್ಥಿಗನುಗುಣವಾಗಿ ಬದುಕುವ ಇರಾದೆಯಿದೆ. ಆದರೆ ಮಗನ ಪ್ರಜ್ಞೆಯು ಆಧುನಿಕ ನಾಗರಿಕ ಮೌಲ್ಯಗಳಿಂದ ಪ್ರಭಾವಿತವಾಗಿದೆ. ಸಂವೇದನಾ ಶೀಲನಾಗಿರುವ ಈತ ತನ್ನ ಅಸ್ತಿತ್ವಕ್ಕಾಗಿ ತಂದೆಯೊಡನೆ ಸಂಘರ್ಷಕ್ಕಿಳಿಯುತ್ತಾನೆ. ತನ್ನ ಭಾವನೆಗಳಿಗೆ, ಅಭಿಪ್ರಾಯಗಳಿಗೆ ತಂದೆಯಿಂದ ಪುಷ್ಟಿಯಿಲ್ಲವೆಂದು ಆಕ್ರೋಶ ವ್ಯಕ್ತಪಡಿಸುತ್ತಾನೆ. ಕಥಾನಾಯಕನ ಮಾನಸಿಕ ದುರ್ಬಲತೆಗೆ ನಗರ ಪರಿಸರವು ಕಾರಣವಾದರೂ, ಅದನ್ನು ಅರಿಯದೆ, ಅದು ತನ್ನ ತಂದೆಯಿಂದಲೇ ಬಂದದ್ದು ಎಂಬ ತೀರ್ಮಾನಕ್ಕೂ ಬರುತ್ತಾನೆ. ಅಷ್ಟರ ಮಟ್ಟಿಗೆ ಅವನ ಪ್ರಜ್ಞೆ ತಂದೆಯ ವಿರುದ್ಧವಾಗಿ, ತನ್ನ ಅಸ್ತಿತ್ವಕ್ಕಾಗಿ ರೂಪುಗೊಂಡಿದೆ. ತಂದೆ-ಮಗನ ನಡುವಿನ ಸಂಘರ್ಷ ತೀವ್ರತೆಯನ್ನು ವಿವರಿಸಲು ಕನಸನ್ನು ಕಾದಂಬರಿಯು ಬಳಸಿಕೊಂಡಿದೆ.

"ಕಳೆದ ಆರು ವರ್ಷಗಳಿಂದ ಒಂದು ಕನಸು ಮೇಲಿಂದ ಮೇಲೆ ಬೀಳುತ್ತಿದೆ ಅವನಿಗೆ. ಒಂದು ನಿರ್ಜನವಾದ ಬೀದಿ-ತಾನೊಬ್ಬನೇ ಹೊರಟಿದ್ದಾನೆ. ಎಲ್ಲಿಗೋ ಗೊತ್ತಿಲ್ಲ ಗಾಳಿ ಮಾತ್ರ ಬೀಸುತ್ತಿದೆ. ದಾರಿಯ ಎರಡೂ ಬದಿಯಲ್ಲಿ ಮರಗಳ ಸಾಲುಗಳು. ಮರದಲ್ಲಿ ಎಲೆಗಳೇ ಕಾಣುತ್ತಿಲ್ಲ. ಬರಿ ಕಾಗೆಗಳು ತಲೆಯ ಮೇಲೆ ಒಂದೇ ಸವನೆ ಅವು ಹೇಲುತ್ತಿವೆ. .....ಅಷ್ಟರಲ್ಲಿ ಭಯಂಕರ ಸದ್ದನ್ನು ಮಾಡುತ್ತ ಒಂದು ಲೆಲ್ಯಾಂಡ್ ಬಂದು ತನ್ನನ್ನು ನೆಲಕ್ಕೆ ಕೆಡವಿತು. ಒಂದು ಗಾಲಿ ಹಿಂದಿನದು ಎದೆಯ ಮೇಲೆ ನಿಂತಿದೆ. ಎಂತಹ ವಿಚಿತ್ರ ಭಯ ಆವರಿಸಿತು ಅವನನ್ನು. ಮುಂದು ಒಂದು ನಿಮಿಷದಲ್ಲಿ ತಾನು ಟ್ರಕ್ಕಿನ ಬದಿಗೆ ನಿಂತಿದ್ದಾನೆ.

ಅದರ ಅಡಿಯಲ್ಲಿ ಬಿದ್ದವನ ಮುಖವನ್ನು ಬಗ್ಗಿ ನೋಡುತ್ತಾನೆ. ಅಯ್ಯೋ! ಅದು ತನ್ನ ತಂದೆಯ ಮುಖ"[೪]

ಇಲ್ಲಿ ಕಥಾನಾಯಕನನ್ನು ಕಾಡುತ್ತಿರುವ ಅನಾಥ ಪ್ರಜ್ಞೆ, ತನ್ನ ಬದುಕಿನ ನಿರ್ದಿಷ್ಟ ಗೊತ್ತು ಗುರಿಗಳಿಲ್ಲದೆ ಅವನು ಮನೋದ್ವಂದ್ವಕ್ಕೊಳಗಾಗಿರುವುದು, ತನ್ನೀ ದುಸ್ಥಿತಿಗೆ ತಂದೆಯೇ ನೇರವಾದ ಕಾರಣ. ತಾನು ಇದರಿಂದ ಪಾರಾಗಬೇಕಾದರೆ ತಂದೆಯು ಸಾಯಬೇಕು ಎಂಬ ನಿಲುವು ನಾಯಕನ ಪ್ರಜ್ಞೆಯಲ್ಲಿ ಸೇರಿ ಹೋಗಿದೆ. ಅದು ಕನಸಿನ ರೂಪದಲ್ಲಿ ಅಸ್ಪಷ್ಟವಾಗಿ ಅವನಿಗೆ ವ್ಯಕ್ತವಾಗುತ್ತಿದೆ. ತಂದೆ-ಮಗನ ನಡುವಿನ ಸಂಘರ್ಷದ ತೀವ್ರತೆಯು ಹೆಚ್ಚಾಗಿರುವ ಕಡೆ, ತೀವ್ರತೆಯನ್ನು ಕಡಿಮೆ ಮಾಡುವ ದೃಷ್ಟಿಯಿಂದ ಕಾದಂಬರಿಯಲ್ಲಿ ಕನಸು ಪ್ರತಿಮೆಗಳನ್ನು ಬಳಸಿಕೊಳ್ಳಲಾಗಿದೆ. ಇದೊಂದು ಕಾದಂಬರಿಯಲ್ಲಿನ ಯಶಸ್ವಿ ತಂತ್ರಗಾರಿಕೆಯೂ ಹೌದು.

'ನಿರಿಂದ್ರಿಯ' ಕಾದಂಬರಿಯಲ್ಲಿ ತಲೆಮಾರು ಸಂಘರ್ಷವು ವ್ಯಾಪಕವಾಗಿದೆ. ಹಲವು ಮಾದರಿಯ ತಲೆಮಾರು ಸಂಘರ್ಷಗಳನ್ನು ಇಲ್ಲಿ ಕಾಣಬಹುದು. ಇಲ್ಲಿಯ ರೊಳ್ಳಿಯು ಮಗ ಮತ್ತು ತಂದೆಯ ಸ್ಥಾನದಲ್ಲಿ ನಿಂತು ಸಂಘರ್ಷವನ್ನು ಎದುರಿಸುತ್ತಾನೆ. ಕಾದಂಬರಿಯಲ್ಲಿ ರೊಳ್ಳಿಯು ತಮ್ಮ ತಂದೆಯ ಬಗ್ಗೆ ಹೊಂದಿರುವ ದೃಷ್ಟಿಕೋನವಿದು.

"ನಿಜವಾಗಿ ನಾನು ಹುಟ್ಟಿದ್ದು ಎಂದು? ನನಗೆ ಈಗ ಎಷ್ಟು ವರ್ಷ? ಒಂದು ವೇಳೆ ನನಗೆ ಈಗ ೫೮ ವರ್ಷಗಳು ಎಂಬುದೇ ನಿಜವಾಗಿದ್ದರೆ? ಅಯ್ಯೋ! ಎಂತಹ ನಷ್ಟ! ಎರಡು ವರ್ಷಗಳ ಸಂಬಳ ಕಳೆದು ಕೊಂಡೆನಲ್ಲ, ವಿಚಿತ್ರವಾದ ಸ್ಥಿತಿಯಲ್ಲಿ ಅವನ ಮನಸ್ಸು ಕುದಿಯ ತೊಡಗಿತ್ತು.

ತಂದೆಯ ಮೇಲೆ ಭಯಂಕರ ಕೋಪ ಬಂತು. ತನ್ನ ವಯಸ್ಸಾನ್ನಾದರೂ ಸರಿಯಾಗಿ ಹಚ್ಚಿಡಬಹುದಾಗಿತ್ತು. ಇಷ್ಟನ್ನು ಮಾಡಲಿಲ್ಲ. ರೊಳ್ಳಿ ಮುಂಬೈಗೆ ಬಂದಂದಿನಿಂದ ತನಗೊಬ್ಬ ತಂದೆಯಿದ್ದ ಎಂಬ ವಿಷಯವನ್ನೆ ಮರೆತುಬಿಟ್ಟಿದ್ದ"[೫]

ಇಲ್ಲಿ ಅವನ ತಂದೆಗೆ ಮಕ್ಕಳ ಬಗ್ಗೆ ಕಾಳಜಿ ಇಲ್ಲದಿರುವುದು, ಕುಟುಂಬದಲ್ಲಿ ಪ್ರೀತಿಯ ಕೊರತೆ, ಊರಿನಲ್ಲಿ ತನ್ನ ಪ್ರತಿಷ್ಠೆಯನ್ನು ಮೆರೆಸುವ ಸಲುವಾಗಿ ದೇಸಾಯಿಯೊಡನೆ ವೈರವನ್ನು ಬೆಳೆಸಿಕೊಂಡು ಕುಟುಂಬ ಆರ್ಥಿಕ ಸಂಕಷ್ಟದಲ್ಲಿ ಸಿಲುಕುವಂತೆ ಮಾಡಿದ ಕಾರಣಕ್ಕಾಗಿ ರೊಳ್ಳಿ ತನ್ನ ತಂದೆಯನ್ನು ದ್ವೇಷಿಸುತ್ತಿದ್ದಾನೆ. ಜೊತೆಗೆ ತನ್ನ ಜನ್ಮದಿನಾಂಕವನ್ನು ಸರಿಯಾಗಿ ಹಚ್ಚಿಡದಿದ್ದದ್ದು ರೊಳ್ಳಿಗೆ ಒಂದು ಕಡೆ ನಷ್ಟವಾಗುತ್ತಿದೆ. ಇದು ತಂದೆಯ ಮೇಲೆ ಅವನ ಅಸಹನೆಯನ್ನು ಹೆಚ್ಚಿಸುತ್ತದೆ. ಆದರೆ ಅವನ ತಂದೆ ಅನಕ್ಷರಸ್ಥ, ಗ್ರಾಮೀಣ ಪರಿಸರದಲ್ಲಿ ಬೆಳೆದವನು. ಅವನ ಆಲೋಚನೆ ಮತ್ತು ಅನುಭವದ ಕ್ಷಿತಿಜ ವಿಸ್ತಾರಗೊಂಡಿಲ್ಲ. ಇಲ್ಲಿಯೂ ಕೂಡ ರೊಳ್ಳಿಯ ತಂದೆ ಸಾಂಪ್ರದಾಯಿಕ ಮೌಲ್ಯಗಳ ಪ್ರತಿನಿಧಿಯಾದರೆ, ರೊಳ್ಳಿಯು ಆಧುನಿಕ ಸಾಮಾಜಿಕ

ಮೌಲ್ಯಗಳ ಪ್ರತಿನಿಧಿಯಾಗಿ ಮುಖಾ-ಮುಖಿಯಾಗುವುದು ತಲೆಮಾರು ಸಂಘರ್ಷಕ್ಕೆ ಮುಖ್ಯ ಕಾರಣವಾಗುತ್ತದೆ.

ಆದರೆ ರೊಳ್ಳಿಯು ತೀವ್ರ ಆರ್ಥಿಕಸಂಕಷ್ಟದಿಂದ ಓದಿ, ತನ್ನ ತಂದೆಯಿಂದ ಯಾವುದೇ ಆರ್ಥಿಕ ನೆರವನ್ನು ಪಡೆಯದೆ ತನ್ನ ಬದುಕನ್ನು ರೂಪಿಸಿಕೊಳ್ಳುತ್ತಾನೆ. ಇದರಿಂದ ಹಣದ ಮಹತ್ವವನ್ನು ಅರಿತ ಅವನು ಹಣವನ್ನು ಖರ್ಚು ಮಾಡಲು ಹಿಂಜರಿಯುತ್ತಾನೆ. ಇದು ರೊಳ್ಳಿ ತನ್ನ ಜೀವನದಲ್ಲಿ ಪಡೆದ ನೈಜ ಅನುಭವ, ಅತ್ಯಂತ ಸ್ಪಷ್ಟವಾದ ನಂಬಿಕೆ. ಇವನು ಯಾವುದನ್ನು ಸತ್ಯವೆಂದು ನಂಬಿದ್ದನೋ ಆ ನಂಬಿಕೆಗಳು ರೊಳ್ಳಿಯ ಮಕ್ಕಳಿಗೆ ದೌರ್ಬಲ್ಯಗಳಾಗಿ ಕಾಣುತ್ತವೆ.

> "ಅಯ್ಯೋ ಪಾಪ! ಇಂತಹ ಮನಸ್ಸು ಬರಲು ಭಾಗ್ಯ ಬರಬೇಕು. ಸಾಹಸವೆಂಬುದೆ ಇಲ್ಲ. ಬಾಲ್ಯದಲ್ಲಿ ತಂದೆ-ತಾಯಿಗಳ ಶಿಕ್ಷೆ, ತಾರುಣ್ಯದಲ್ಲಿ ನೌಕರಿಯ ಗೂಡಿನಲ್ಲಿ ಕಣ್ಣು ಕಟ್ಟಿಕೊಂಡು ಸುತ್ತುತ್ತಿರುವುದು, ವೃದ್ಧಾಪ್ಯದಲ್ಲಿ ನಿವೃತ್ತಿವೇತನದ ಗಂಜಿ. ಸೌಂದರ್ಯ ದೃಷ್ಟಿಯಿಲ್ಲದ ಕುರುಡರನ್ನು ತೆಗೆದುಕೊಂಡು ಮಾಡುವುದೇನು? ಇಂತಹವರನ್ನು ನೋಡಿದರೆ ನನಗೆ ಕನಿಕರವುಂಟಾಗುತ್ತದೆ. ಯಾಕಾದರೂ ಹುಟ್ಟಿದರೋ? ಇಂತಹ ಸಪ್ಪೆ ಬಾಳಿನಲ್ಲಿ ಸುರಿದುಕೊಳ್ಳುವ ಸೌಭಾಗ್ಯವಾದರೂ ಏನು?"[೬]

ಎಂದು ಮಕ್ಕಳು ರೊಳ್ಳಿಯನ್ನು ಗೇಲಿ ಮಾಡುತ್ತಾರೆ. ಇಲ್ಲಿ ರೊಳ್ಳಿ ಮತ್ತು ಅವನ ಮಕ್ಕಳಿಗೆ ಆಗಿರುವ ವಿಭಿನ್ನ ಅನುಭವ, ಜೀವನವನ್ನು ನೋಡುವ ದೃಷ್ಟಿಕೋನದಲ್ಲಾದ ಬದಲಾವಣೆಗಳು ಸಂಘರ್ಷಕ್ಕೆ ಕಾರಣವಾಗಿವೆ. ಇಲ್ಲಿ ರೊಳ್ಳಿ ಮತ್ತು ಅವನ ಮಕ್ಕಳ ನಡುವೆ ತಂದೆ ಜಿಪುಣನೆಂಬ ಕಾರಣಕ್ಕಾಗಿ, ಹಣಕ್ಕಾಗಿ ಸಂಘರ್ಷ ನಡೆಯುತ್ತದೆ.

ಎಲ್ಲಾ ಕಾದಂಬರಿಗಳು ಕಿರಿಯ ತಲೆಮಾರಿನ ಜನರ ದೃಷ್ಟಿಕೋನದಲ್ಲಿ ತಲೆಮಾರು ಸಂಘರ್ಷವನ್ನು ಒಳಗೊಂಡಿವೆ. ಜೊತೆಗೆ ಕಾದಂಬರಿಯ ನಿರೂಪಣೆಯಲ್ಲಿಯೂ ಅವರ ಪರವಾದ ಒಲುವಿದೆ. ಆದರೆ ಈ ಕಾದಂಬರಿಯಲ್ಲಿ ರೊಳ್ಳಿಯು ಒಬ್ಬ ಮಗನಾಗಿ, ತಂದೆಯಾಗಿ ತಲೆಮಾರು ಸಂಘರ್ಷಕ್ಕೆ ಒಳಗಾಗುವುದು ವಿಶೇಷ. ಕಾದಂಬರಿಯಲ್ಲಿ ತಂದೆಗೆ ದೊರೆಯುವ ಅನುಭವಗಳನ್ನು ಚಿತ್ರಿಸಲಾಗಿದೆ. ತಂದೆ-ಮಕ್ಕಳ ಸಂಘರ್ಷದಲ್ಲಿ ಯಾರ ಪರವಾದ ನಿರೂಪಣೆಯನ್ನು ಮಾಡದೆ, ಇಬ್ಬರ ಅನುಭವ, ದೃಷ್ಟಿಕೋನಗಳ ಹಿನ್ನೆಲೆಯೊಂದಿಗೆ ಸಂಘರ್ಷವನ್ನು ಕಾದಂಬರಿ ಕಾಣಿಸುತ್ತದೆ.

ಕುಸುಮಾಕರರ ಇತ್ತೀಚಿನ 'ಪರಿಘ' ಮತ್ತು 'ಬಯಲು-ಬಸಿರು' ಕಾದಂಬರಿಗಳಲ್ಲಿ ತಲೆಮಾರು ಸಂಘರ್ಷವು ಹೆಚ್ಚಾಗಿ ಚಿತ್ರಣಗೊಂಡಿಲ್ಲ. ಆದರೆ ಇದರ ಇರುವಿಕೆಗೆ ಯಾವುದೇ ಧಕ್ಕೆಯೂ ಆಗಿಲ್ಲ. 'ಪರಿಘ' ಕಾದಂಬರಿಯಲ್ಲಿ ತಂದೆ-ಮಗ ಇವರ ನಡುವಿನ ಸಂಘರ್ಷವು ನಿರೂಪಣೆಗೊಂಡಿಲ್ಲ. ಇಡೀ-ಕಾದಂಬರಿಯಲ್ಲಿ ಎಲ್ಲಿಯೂ ಅಜೇಯ ಮತ್ತು ಅವನ ತಂದೆ ಮುಖಾ-ಮುಖಿಯಾಗಿಲ್ಲ, ಮಾತನಾಡಿಲ್ಲ. ಒಬ್ಬರು ಮತ್ತೊಬ್ಬರ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸುವುದಿಲ್ಲ. ತಂದೆ-ಮಗ ಇವರು ತಾಳುವ ತಾಟಸ್ಥ್ಯದ

ನಿಲುವಿನಲ್ಲಿಯೇ ತಲೆಮಾರು ಸಂಘರ್ಷದ ಅಸ್ತಿತ್ವವಿದೆ. ಈ ಕಾದಂಬರಿಯಲ್ಲಿ ತಲೆಮಾರು ಸಂಘರ್ಷವು ಸುಪ್ತವಾಗಿ ಅಡಗಿದೆ.

'ಬಯಲು-ಬಸಿರು' ಕಾದಂಬರಿಯಲ್ಲಿ ಒಂದೇ ಒಂದು ಕಡೆ ಮಾತ್ರ ಕಥಾನಾಯಕನಾದ ಅನಿಕೇತಾನಂದ ಮತ್ತು ಅವನ ತಂದೆಯ ನಡುವಿನ ಸಂಘರ್ಷವನ್ನು ನಿರೂಪಿಸಲಾಗಿದೆ. ತನ್ನ ತಂದೆಯ ಬಗ್ಗೆ ಅನಿಕೇತಾನಂದ ಮಾತನಾಡುವ ಮಾತುಗಳಿವು.

> "ತಂದೆ.... ನನಗೆ ಹೇಳಲು ನಾಚಿಕೆಯಾಗುತ್ತದೆ. ಆದರೂ ಹೇಳುತ್ತೇನೆ. ಅವನು ಕಾಮವನ್ನು ದೇವಕಾಮವನ್ನಾಗಿ ಮಾಡುವ, ಕಾಮದಿಂದ ಅನಂತವಾದ ಆನಂದವನ್ನು ಅನುಭವಿಸುವ ತಾಂತ್ರಿಕ ಮಾರ್ಗವೊಂದಿದೆಯಂತೆ. ಅದಕ್ಕಾಗಿ ತನ್ನನ್ನು ಒಲಿದು ಬಂದ, ಅವನ ಬೀಜವನ್ನು ತನ್ನ ಕ್ಷೇತ್ರದಲ್ಲಿ ಸ್ವೀಕರಿಸಿ ಬೆಳೆದ ದೀರ್ಘದಾಂಪತ್ಯದಲ್ಲಿಯೂ ಮುಗ್ಧೆಯಾಗಿ ಉಳಿದು, ಸಂಸಾರದ ಹೊಣೆಯನ್ನ ಹೊತ್ತು ಆರ್ಥಿಕ ಭಾರವನ್ನು ವಹಿಸಿದ ತನ್ನ ತಾಯಿಯನ್ನು ಬಿಟ್ಟು ಒಂದು ಚೆಲ್ಲು ಹೆಣ್ಣನ್ನು ಹುಡುಕಿಕೊಂಡು ಹೋದ"[2]

ಕಾದಂಬರಿಯಲ್ಲಿ ಒಂದು ಕಡೆ ಮಾತ್ರ ಬಂದಿರುವ ತಲೆಮಾರು ಸಂಘರ್ಷವು ಇಡೀ ಕಾದಂಬರಿಯನ್ನು ವ್ಯಾಪಿಸಿಕೊಂಡಿದೆ. ಅಮೇರಿಕಾದಿಂದ ಭಾರತಕ್ಕೆ ಬರಲು ಅನಿಕೇತಾನಂದನಿಗೆ ಇದೇ ಪ್ರೇರಣೆ ನೀಡಿದೆ. ದಾಂಪತ್ಯದ ಜೀವನವನ್ನು ನಿರಾಕರಿಸಿ ಆಧ್ಯಾತ್ಮದೆಡೆಗೆ ಅವನ ಒಲವು ಹರಿಯಲು ಇದು ಪ್ರಭಾವ ಬೀರಿದೆ. ಅನಿಕೇತನಂದನ ಬದುಕು ಮುಖ್ಯ ತಿರುವು ಪಡೆಯುವಲ್ಲಿ ಅವನಿಗೆ ಹಿಡಿಸದ ಅವನ ತಂದೆಯ ಬದುಕು ಕಾರಣವಾಗಿದೆ.

'ಮುಗಿಯದ ಕತೆ' ಮತ್ತು 'ಪರಿಘ' ಕಾದಂಬರಿಗಳನ್ನುಳಿದು ಉಳಿದ ಕಾದಂಬರಿಗಳಲ್ಲಿ ತಲೆಮಾರು ಸಂಘರ್ಷವು ತೀವ್ರ ಸ್ವರೂಪವನ್ನು ಪಡೆದಿದೆ. ಓದುಗರ ಭಾವೋದ್ವೇಗವನ್ನು ಕಡಿಮೆ ಮಾಡಲು ಕಾದಂಬರಿಯಲ್ಲಿ ತಲೆಮಾರು ಸಂಘರ್ಷವು ತೀವ್ರವಾಗಿರುವ ಕಡೆ ಫ್ಲ್ಯಾಶ್ ಬ್ಯಾಕ್ ತಂತ್ರವನ್ನು ಅನುಸರಿಸಲಾಗಿದೆ.

ಕುಸುಮಾಕರರ ಎಲ್ಲಾ ಕಾದಂಬರಿಗಳಲ್ಲಿಯೂ ತಲೆಮಾರು ಸಂಘರ್ಷವು ತಂದೆ-ಮಗ ಇವರ ನಡುವೆ ನಡೆಯುತ್ತದೆ. ಆದರೆ ತಾಯಿ-ಮಗ ಇವರ ನಡುವೆ ಸಂಘರ್ಷವು ಎಲ್ಲಿಯೂ ನಡೆಯುವುದಿಲ್ಲ. ಏಕೆ? ಕುಸುಮಾಕರರ ಎಲ್ಲಾ ಕಾದಂಬರಿಗಳಲ್ಲಿಯೂ ತಾಯಿಯೇ ಮಗನ ಬಗ್ಗೆ ಕಾಳಜಿವಹಿಸುತ್ತಾಳೆ. ಮಗನ ಭವಿಷ್ಯ ಉಜ್ವಲವಾಗಲೆಂದು ಹಾರೈಸುತ್ತಾಳೆ. ಹದಿಹರೆಯದ ಸಂಕ್ಷೋಭೆಗೊಂಡ ಮನಸ್ಸಿಗೆ ವಾತ್ಸಲ್ಯ ತಾಯಿಯಿಂದ ದೊರೆಯುತ್ತದೆ. 'ಪರಿಘ' ಕಾದಂಬರಿಯಲ್ಲಿನ ಅಜೇಯನ ತಾಯಿ ಮತ್ತು ಅರವಿಂದನ ತಾಯಿ ಶಕುಂತಲೆಯಲ್ಲಿ ಇದು ಪ್ರಧಾನವಾಗಿ ಕಂಡುಬರುತ್ತದೆ. ಹಾಗಾದರೆ ಕುಟುಂಬದಲ್ಲಿನ ತಂದೆಗೆ ಮಗನ ಬಗ್ಗೆ ಕಾಳಜಿಯಿಲ್ಲವೆ? ಮಕ್ಕಳ ಯೋಗಕ್ಷೇಮದ ಬಗ್ಗೆ ಅವನು ಕಾದಂಬರಿಗಳಲ್ಲಿ ಯೋಚಿಸುವುದಿಲ್ಲವೇ? ಎಂಬ

ಪ್ರಶ್ನೆಗಳಿಗೆ ತಾಯಿಯ ಪ್ರಮಾಣದಲ್ಲಿ ಪ್ರೀತಿ ವಾತ್ಸಲ್ಯಗಳನ್ನು ತಂದೆಗೆ ತೋರಲು ಆಗದಿರಬಹುದು, ಆದರೆ ಖಂಡಿತವಾಗಿಯೂ ಮಗನ ಬಗ್ಗೆ ತಂದೆಗೆ ಆದರವಿದೆ. ಅವನ ಭವಿಷ್ಯದ ಬಗ್ಗೆ ಜವಾಬ್ದಾರಿಯಿದೆ.

ಕುಸುಮಾಕರರ ಎಲ್ಲಾ ಕಾದಂಬರಿಗಳಲ್ಲಿಯೂ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಿದೆ. ಕುಟುಂಬದಲ್ಲಿನ ಹೆಚ್ಚಿನ ಅಧಿಕಾರವು ತಂದೆಯಲ್ಲಿ ಕೇಂದ್ರೀಕರಣಗೊಂಡಿದೆ. ಸಾಮಾಜಿಕಮೌಲ್ಯಗಳು ತಂದೆಯನ್ನು ನಿಯಂತ್ರಿಸಿರುವಂತೆಯೇ, ಆಧುನಿಕ ವ್ಯಕ್ತಿವಿಶಿಷ್ಟತಾಮೌಲ್ಯಗಳಿಂದ ಮಗನ ಪ್ರಜ್ಞೆ ಜಾಗೃತಗೊಂಡಿದೆ. ಹೆಚ್ಚು ಸಂವೇದನಾಶೀಲನಾಗಿರುವ ಮಗ ತನ್ನ ಹಕ್ಕುಗಳನ್ನು ಪಡೆಯಲು ತಂದೆಯೊಡನೆ ಸಂಘರ್ಷಕ್ಕಿಳಿಯುತ್ತಾನೆ. ತಾಯಿಯೊಡನೆ ಸಂಘರ್ಷಕ್ಕಿಳಿದರೂ ಆತನಿಗೆ ಏನೂ ಪ್ರಯೋಜನವಿಲ್ಲ. ಈಗಾಗಲೇ ಕುಟುಂಬದ ಅಧಿಕಾರವು ತಂದೆಯಲ್ಲಿ ಕೇಂದ್ರೀಕರಣಗೊಂಡಿದೆ. ಆದ್ದರಿಂದ ತಂದೆಯೊಡನೆ ಸಂಘರ್ಷವು ಅನಿವಾರ್ಯವಾಗಿ ಕಾದಂಬರಿಗಳಲ್ಲಿ ಕಂಡುಬರುತ್ತದೆ.

ತಾಯಿ-ಮಗ ಇವರ ನಡುವೆ ತಲೆಮಾರು ಸಂಘರ್ಷವು ನಡೆಯದಿರಲು ಲಿಂಗಭಿನ್ನತೆಯು ಕಾರಣವಾಗಿರುವ ಸಾಧ್ಯತೆಯಿದೆ. ಲಿಂಗಭಿನ್ನತೆಯು ಒಂದು ನೈಸರ್ಗಿಕ ಕೊರತೆ. ತನಗೆ ಯಾವುದರ ಕೊರತೆಯಿದೆಯೋ ಅದರತ್ತ ವ್ಯಕ್ತಿಯ ಒಲವು ಹೆಚ್ಚಾಗಿರುತ್ತದೆ. ಈ ವಿಶಿಷ್ಟವಾದ ಸಹಜವಾದ ಆಕರ್ಷಣೆಯು ಮನುಷ್ಯನ ಪ್ರಜ್ಞೆಯಲ್ಲಿ ಸೇರಿರುವುದರಿಂದ ತಾಯಿ-ಮಗ ಇವರಲ್ಲಿ ಸಂಘರ್ಷವು ಕಾದಂಬರಿಗಳಲ್ಲಿ ನಡೆಯದಿರಲು ಕಾರಣವಾಗಿರಬಹುದು.

'ಮುಗಿಯದ ಕತೆ' ಮತ್ತು 'ನಿರಿಂದ್ರಿಯ' ಕಾದಂಬರಿಗಳಲ್ಲಿ ತಂದೆ ಮತ್ತು ಮಗಳ ನಡುವೆ ಸಂಘರ್ಷವಿದೆ. 'ಮುಗಿಯದ ಕತೆ'ಯಲ್ಲಿನ ಸರಸ್ವತಿ 'ನಿರಿಂದ್ರಿಯ'ದ ವೃಂದಾ ಇವರು ತಮ್ಮ ತಂದೆಯನ್ನು ಕೆಲವು ಕಡೆ ಮಾತ್ರ ತೆಗಳುತ್ತಾರೆ. ಈ ಎರಡೂ ಕಾದಂಬರಿಗಳಲ್ಲಿ ತಂದೆ-ಮಗಳ ನಡುವೆ ನಡೆಯುವ ತಲೆಮಾರು ಸಂಘರ್ಷದ ಸ್ವರೂಪ ಒಂದೇ ರೀತಿ ಇದೆ. ಇದನ್ನು ನೋಡುವುದಾದರೆ, 'ಮುಗಿಯದ ಕತೆ'ಯಲ್ಲಿ

> "ತಾನು ತಮ್ಮ ದಾಸಿ. ತಮಗಾಗಿ ಯಾವ ತ್ಯಾಗಕ್ಕೂ ಸಿದ್ಧಳು. ನೀವು ನನ್ನ ಹೃದಯದ ದೇವತೆ. ನಿಮ್ಮ ಸೇವೆಯಲ್ಲಿ ನನ್ನ ಬಾಳಿನ ಸಾರ್ಥಕತೆಯಿದೆ' ಎಂದು ತಾನು ಹೇಳಬೇಕು. ಇದೆಲ್ಲವೂ ತಾವಿಬ್ಬರೂ ದೂರನಿಂತೇ ಮಾತಾಡಬೇಕೆಂಬ ಆಪೇಕ್ಷೆ ಇಲ್ಲ. ದೇಶಪಾಂಡೆ ಮಲಗಿದ್ದುದನ್ನು ಕಂಡು ಅವಳ ಉತ್ಸಾಹವೂ ಕುಗ್ಗಿತು. ದೇಶಪಾಂಡೆಯ ವಿಷಯದಲ್ಲಿ ಅವಳಿಗೆ ತಿರಸ್ಕಾರ ಬಂತು. ತನ್ನ ತಂದೆ ತನಗೆ ದ್ರೋಹ ಮಾಡಿದ ಎನ್ನಿಸಿತು. ದೇಶಪಾಂಡೆ ತನ್ನ ಪೂರ್ವಜನ್ಮದ ಶತ್ರು. ಈಗ ಗಂಡನಾಗಿ ತನ್ನ ವೈರವನ್ನು ಸಾಧಿಸಿಕೊಳ್ಳಲು ಬಂದಿದ್ದಾನೆ ಎಂಬ ಭಾವನೆ ಅವಳಿಗೆ ಬಂತು."[೮]

'ನಿರಿಂದ್ರಿಯ'ದಲ್ಲಿ ವೃಂದಾಳ ಕನಸಿದು.

> "ತಾನು ಯಾರನ್ನು ಒಲಿಸಲು ಕುಣಿಯುತ್ತಿದ್ದಾಳೆಯೊ ಆ ತರುಣ ತನ್ನ ಕುಣಿತವನ್ನು ನೋಡುತ್ತಾ ಎದುರು ಕುಳಿತಿದ್ದಾನೆ. ಅವನನ್ನು ತಣಿಸುವುದರಲ್ಲಿ ತನ್ನ ಜೀವನದ

ಸಾರ್ಥಕತೆಯಿದೆ. ಆ ತರುಣ ರಂಗಮಂಟಪದಲ್ಲಿ ಬಂದ ಇನ್ನೇನು ಇಬ್ಬರು ಕೈಕೈ ಹಿಡಿದು, ಕೈಕೈ ಕುಲುಕಿಸಿ, ಮೈ ಮೈ ಮಲಕಿಸಿ ಕುಣಿಯಲು ಹೆಜ್ಜೆ ಹಾಕಲಿದ್ದಾರೆ. ಅವಳಿಗೆ ತನ್ನ ತಂದೆಯ ಮುಖ ಕಾಣಿಸಿತು. ಅವನ ಕ್ರೂರ ಧ್ವನಿ ಕಿವಿಗೆ ಅಪ್ಪಳಿಸಿತು. ಅವಳ ಆನಂದ ಸರೋವರ ಬತ್ತಿತು. ಮೈಸೋತಿತು, ಮನ ಕುಗ್ಗಿತು, ಹಿಗ್ಗು ಆರಿತು, ತನಗೆ ಆಧಾರವಾಗಿ ಬಂದ, ತನ್ನ ಕೈ ಹಿಡಿದು ನಿಂತ ತರುಣನ ಕಣ್ಣುಗಳತ್ತ ನೋಡುತ್ತಾಳೆ; ಆ ತರುಣನೇ ಅಲ್ಲಿ ಇಲ್ಲ''[೯]

ಈ ಮೇಲಿನ ಎರಡು ಕಾದಂಬರಿಗಳ ಉಲ್ಲೇಖಗಳಲ್ಲಿಯೂ ಸರಸ್ವತಿ ಮತ್ತು ವೃಂದಾ ಈರ್ವರು ತಮ್ಮ ತಂದೆಯರ ಬಗ್ಗೆ ಅಸಹನೆಯನ್ನು ವ್ಯಕ್ತಪಡಿಸುತ್ತಾರೆ. ಜೊತೆಗೆ ಕಾರಣಗಳಲ್ಲಿಯೂ ಸಾಮ್ಯತೆಯಿದೆ. ಸರಸ್ವತಿ ತನ್ನ ಗಂಡ ದೇಶಪಾಂಡೆ ಅವಳ ಭಾವನೆಗಳಿಗೆ ಸ್ಪಂದಿಸದಿದ್ದಾಗ ಗಂಡನ ಮೇಲಿನ ಕೋಪ ತಂದೆಯ ಕಡೆಗೆ ತಿರುಗುತ್ತದೆ. ಇವನಿಗಿಂತಲೂ ಉತ್ತಮ ವ್ಯಕ್ತಿಗೆ ತನ್ನನ್ನು ಮದುವೆ ಮಾಡಬಹುದಿತ್ತು ಎಂಬ ಧೋರಣೆ ಅವಳ ಮನಸ್ಸಿನಲ್ಲಿದೆ.

ಅದೇ ರೀತಿಯಲ್ಲಿ ವೃಂದಾಳು ತಾನು ಬಾಲ್ಯದಲ್ಲಿಯೇ ಇಷ್ಟಪಟ್ಟಿದ್ದ ಹುಡುಗನ ನೆನಪು ಮಧ್ಯವಯಸ್ಸಿಗೆ ಬಂದಾಗಲೂ ಮಾಸದಿದ್ದಾಗ ತನ್ನ ತಂದೆಯನ್ನು ದ್ವೇಷಿಸುತ್ತಾಳೆ. ಇಲ್ಲಿ ದಾಂಪತ್ಯದಲ್ಲಿನ ವಿರಸ ಅಥವಾ ಬಿರುಕು ತಂದೆಯೊಡನೆ ಸಂಘರ್ಷ ರೂಪವನ್ನು ತಾಳಿದೆ. ಇದಕ್ಕೆ ತಂದೆ ನಿರ್ವಹಿಸುವ ಕೌಟುಂಬಿಕ ಜವಾಬ್ದಾರಿಯೇ ಮುಖ್ಯ ಕಾರಣ. ದಾಂಪತ್ಯದಲ್ಲಿ ಗಂಡ-ಹೆಂಡಿರ ಮಧ್ಯೆ ಸುಮಧುರ ಬಾಂಧವ್ಯ ಇದ್ದಿದ್ದರೆ ತಂದೆಯೊಡನೆ ಮಗಳ ಸಂಘರ್ಷ ಏರ್ಪಡುತ್ತಿರಲಿಲ್ಲ.

ಮನಃಶಾಸ್ತ್ರದ ದೃಷ್ಟಿಯಲ್ಲಿ ಇದೊಂದು ಬಗೆಯ ಮಾನಸಿಕ ರಕ್ಷಣಾತಂತ್ರ. ಒಬ್ಬ ವ್ಯಕ್ತಿಯ ಮಾನಸಿಕ ಕ್ಷೋಭೆಗೆ ಕಾರಣರಾದವರು ಆ ವ್ಯಕ್ತಿಗಿಂತ ಪ್ರಬಲರಾಗಿದ್ದರೆ ಕೋಪವು ಮತ್ತೊಬ್ಬರೆಡೆಗೆ ಹರಿಯುತ್ತದೆ. ಇಲ್ಲಿ ವೃಂದಾ ಮತ್ತು ಸರಸ್ವತಿಯರು ಸಹ ರೊಳ್ಳಿ ಮತ್ತು ದೇಶಪಾಂಡೆಯವರಿಗಿಂತ ದೈಹಿಕವಾಗಿ ದುರ್ಬಲರಾಗಿರುವುದು ಗಮನಿಸಬೇಕಾದ ಅಂಶ.

ಕುಸುಮಾಕರರ ಕಾದಂಬರಿಗಳಲ್ಲಿ ತಾಯಿ-ಮಗಳು ಮತ್ತು ಅತ್ತೆ-ಸೊಸೆಯರ ನಡುವಿನ ಸಂಘರ್ಷವು ಗಮನ ಸೆಳೆಯುವಂತಹುದು. 'ಮುಗಿಯದ ಕತೆ'ಯಲ್ಲಿ ತಾಯಿ ಮತ್ತು ಮಗಳ ನಡುವೆ ಸಂಘರ್ಷವಿದ್ದರೆ 'ನಿರಿಂದ್ರಿಯ'ದಲ್ಲಿ ಅತ್ತೆ ಮತ್ತು ಸೊಸೆಯ ಮಧ್ಯೆ ಸಂಘರ್ಷವು ಅಲ್ಪ ಪ್ರಮಾಣದಲ್ಲಿ ಬರುತ್ತದೆ.

'ಮುಗಿಯದ ಕತೆ'ಯಲ್ಲಿನ ಸರಸ್ವತಿ ಮತ್ತು ಮಗಳು ಸವಿತಾಳ ನಡುವಿನ ಸಂಘರ್ಷವು ಸೌಂದರ್ಯಕ್ಕೆ ಸಂಬಂಧಿಸಿದ್ದು. ಕಾದಂಬರಿಯಲ್ಲಿ ನಿರೂಪಣೆ ಈ ರೀತಿ ಇದೆ.

''ತಾಯಿಗೆ ಸುಮಾರು ನಲವತ್ತು ತುಂಬಿದೆ.... ಹಿರಿಯವಳೇ ಮಗಳು. ಮದುವೆಯ ವಯಸ್ಸು ಮೀರಿದ್ದರೂ ಲಂಗ ಉಡುತ್ತಿದ್ದವಳು. ತಾಯಿ ಮಗಳಿಗೆ ಜಗಳವೂ ಆಗುತ್ತಿತ್ತು. 'ನೀವು

ಅಕ್ಕತಂಗಿಯರೇನು ಅಂತ ಕೇಳಿದರು ಇವತ್ತ!' ಇದು ತಾಯಿಯ ಮಾತು. ತಾಯಿ ಈ ನೆಪದಲ್ಲಿ ತಾನು ಚಿಕ್ಕವಳು ಎನ್ನಿಸಿಕೊಳ್ಳಬೇಕೆಂಬ ಹಂಬಲದಿಂದ ಆಡಿದ ಮಾತು ಮಗಳಿಗೆ ಅಸಮಾಧಾನವನ್ನುಂಟು ಮಾಡುತ್ತಿತ್ತು."[೧೦]

-ಇಲ್ಲಿ ಸರಸ್ವತಿಗೆ ನಲವತ್ತರ ಮಧ್ಯ ವಯಸ್ಸಿನಲ್ಲಿಯೂ ಹದಿಹರೆಯದ ಹುಡುಗಿಯಂತೆ ಕಾಣಬೇಕೆಂಬ ಬಯಕೆಯಿದೆ. ಮನುಷ್ಯರ ಜೀವನದಲ್ಲಿ ತಾರುಣ್ಯ ಎಲ್ಲರಿಗೂ ಪ್ರಿಯವಾದದ್ದು ಹಾಗಾಗಿ ಅವರ ಮನಸ್ಸು ಮಧ್ಯಮವಯಸ್ಸು ಮತ್ತು ವೃದ್ಧಾಪ್ಯದಲ್ಲಿ ಅದನ್ನು ಬಯಸುತ್ತದೆ. ಸಾವಿನ ಬಗ್ಗೆ ಇರುವ ಭೀತಿ ಮತ್ತು ಬದುಕಿನ ಬಗ್ಗೆ ಇರುವ ಪ್ರೇಮ ಸಹಜವಾಗಿ ಮನುಷ್ಯರು ತಾರುಣ್ಯವನ್ನು ಬಯಸುವಂತೆ ಮಾಡುತ್ತದೆ.

ಸರಸ್ವತಿ ಮತ್ತು ದೇಶಪಾಂಡೆಯರ ದಾಂಪತ್ಯ ಜೀವನವನ್ನು ಮತ್ತು ವೃಂದಾ-ರೊಳ್ಳಿಯವರ ದಾಂಪತ್ಯ ಜೀವನವನ್ನಾಗಲೀ ಗಮನಿಸಿದಾಗ ಅಷ್ಟೇನು ಮಧುರವಾಗಿಲ್ಲ. ದಾಂಪತ್ಯ ಜೀವನದ ನಡುವೆ ಬಿರುಕಿದೆ. ಹಲವು ಕಾಮನೆಗಳು ಈಡೇರದೆ ಹಾಗೆಯೇ ಉಳಿದಿವೆ. ಈಡೇರದ ಲೈಂಗಿಕ ಬಯಕೆಗಳು ಸುಪ್ತ ಪ್ರಜ್ಞೆಯಲ್ಲಿ ಹುದುಗಿ ಜಾಗೃತ ಪ್ರಜ್ಞೆಯ ಮೂಲಕ ಯೌವ್ವನವನ್ನು ಬಯಸುತ್ತಿರುವಂತೆ ಪ್ರೇರೇಪಿಸುತ್ತಿರಬಹುದು. ಜೊತೆಗೆ ಸೌಂದರ್ಯ ಪ್ರಜ್ಞೆಯನ್ನು ಉದ್ದೀಪಿಸುತ್ತಿರಬಹುದು. ತಾಯಿ ಸರಸ್ವತಿ ಮತ್ತು ಮಗಳು ಸವಿತಾ ಅಕ್ಕ ತಂಗಿಯರಂತೆ ಕಾಣುತ್ತಾರೆಂದು ಬೇರೆಯವರು ಹೇಳಿದ ಸಂಗತಿ ತನ್ನ ಕಿವಿಗೆ ಬಿದ್ದಾಗ ಸವಿತಾ ತಾಯಿಯ ಬಗ್ಗೆ ಅಸಹನೆಯನ್ನು ವ್ಯಕ್ತಪಡಿಸುತ್ತಾಳೆ. ಇಲ್ಲಿ ತಾಯಿಗೆ ತಾನು ತರುಣಿಯಂತೆ ಕಾಣುತ್ತೇನೆ ಎಂಬ ಸಂತೋಷವಿದ್ದರೆ, ಮಗಳಿಗೆ ತಾನು ಹೆಚ್ಚು ವಯಸ್ಸಾದವಳಂತೆ ಕಾಣುತ್ತೀನಲ್ಲ ಎಂಬ ಆತಂಕವಿದೆ. ಇದು ತಾಯಿ-ಮಗಳ ಸಂಘರ್ಷಕ್ಕೆ ಪ್ರಮುಖ ಕಾರಣ.

'ನಿರಿಂದ್ರಿಯ' ಕಾದಂಬರಿಯಲ್ಲಿನ ವೃಂದಾಳ ಸೊಸೆಯ ಮಾತಿದು-

"ಇಷ್ಟು ಸೊಗಸಾದ ಸೀರೆ ಯಾರು ಉಡಬೇಕೋ ಅವರು ಉಟ್ಟರೇ ಚೆಂದ. ಹೋಗಲಿ, ತಾವು ಹಿರಿಯರೆಂದು ಕೊಟ್ಟಿದ್ದೇನೆ."[೧೦]

-ಇಲ್ಲಿಯೂ ಸಹ ವೃಂದಾಳ ಯೌವ್ವನದ ಬಯಕೆಗೆ ಧಕ್ಕೆಯಾಗಿದೆ. ಈ ಮಾತು ಪರೋಕ್ಷವಾಗಿ ವೃಂದಾಳ ವಯಸ್ಸನ್ನು ಅಣಕಿಸುತ್ತಿದೆ. ಸೊಗಸಾದ ಸೀರೆ ತಮ್ಮಂತಹ ಯುವತಿಯರಿಗೆ ಹೊರತು ನಿಮ್ಮಂತಹ ಮುದುಕಿಯರಿಗಲ್ಲ ಎಂಬ ಭಾವವಿದೆ.

ಸ್ತ್ರೀಯರು-ಸ್ತ್ರೀಯರ ನಡುವೆ ನಡೆಯುವ ತಲೆಮಾರು ಸಂಘರ್ಷವು ಪುರುಷ-ಪುರುಷರ ನಡುವೆ ನಡೆಯುವ ಸಂಘರ್ಷಕ್ಕಿಂತ ಕಡಿಮೆ ಪ್ರಮಾಣದಲ್ಲಿದ್ದರೂ, ಕುಸುಮಾಕರರ ಕಾದಂಬರಿಗಳಲ್ಲಿ ತಲೆಮಾರು ಸಂಘರ್ಷಕ್ಕೆ ವೈವಿಧ್ಯ ತರುವಲ್ಲಿ ಇದು ಯಶಸ್ವಿಯಾಗಿದೆ.

ಇಲ್ಲಿಯವರೆಗೂ ಕೌಟುಂಬಿಕ ತಲೆಮಾರು ಸಂಘರ್ಷಗಳನ್ನು ಕುರಿತು ಚರ್ಚಿಸಿದ್ದಾಯಿತು. ಸಾರ್ವಜನಿಕ ಬದುಕಿನ ತಲೆಮಾರು ಸಂಘರ್ಷದ ವಿಧವಾಗಿ ಶಿಕ್ಷಕರು-ವಿದ್ಯಾರ್ಥಿಗಳ ನಡುವಿನ ಸಂಘರ್ಷವು ಕುಸುಮಾಕರರ ಕಾದಂಬರಿಗಳಲ್ಲಿ ಅಲ್ಪ ಪ್ರಮಾಣದಲ್ಲಿದೆ. 'ಮುಗಿಯದ ಕತೆ', 'ನಾಲ್ಕನೆಯ ಆಯಾಮ' ಮತ್ತು 'ಪರಿಘ'

ಕಾದಂಬರಿಗಳಲ್ಲಿ ಇದು ಅಲ್ಲಲ್ಲಿ ಬಂದಿದೆ. ಶಿಕ್ಷಕರು ಮತ್ತು ವಿದ್ಯಾರ್ಥಿಗಳ ನಡುವಿನ ಸಂಘರ್ಷಕ್ಕೆ - ವಯಸ್ಸಿನ ಅಂತರ, ವಿಭಿನ್ನ ಅನುಭವ, ಅಭಿರುಚಿಯಲ್ಲಿನ ವ್ಯತ್ಯಾಸ, ವೈಚಾರಿಕತೆಯಲ್ಲಿನ ಭಿನ್ನಾಭಿಪ್ರಾಯ ಮುಂತಾದ ಸಾಮಾನ್ಯ ಕಾರಣಗಳನ್ನು ನೀಡಬಹುದು. ಆದರೂ ಕೌಟುಂಬಿಕ ತಲೆಮಾರು ಸಂಘರ್ಷಕ್ಕಿಂತ ಇದು ಭಿನ್ನವಾಗಿದೆ.

'ಮುಗಿಯದ ಕತೆ'ಯಲ್ಲಿ-

> "ಒಬ್ಬ ಹುಡುಗ ಸಹಜವಾಗಿ ಕೇಳಿದ 'ಸರ್ ನಿಮ್ಮ Aim ಏನು ಇತ್ತು? ಎಂದು. ಏನು ಹೇಳಬೇಕೊ ತಿಳಿಯಲಿಲ್ಲ ದೇಶಪಾಂಡೆಗೆ. 'ಸರ್ ನೀವೂ ಡಾಕ್ಟರ್ ಆಗಬೇಕೆಂದು ಮಾಡಿದ್ದಿರಲ್ಲವೆ?' 'ಹಾಗಾದರೆ ನೀವೇಕೆ ಡಾಕ್ಟರ್ ಆಗಲಿಲ್ಲ?' 'ಆಯ್ತು ಇವರು ಡಾಕ್ಟರ್ ಆಗಿದ್ದರೆ ದೇಶದ ಜನರ ಗತಿ' 'ಗತಿ ಏನು ಗತಿ ಹರ ಹರಾ ಅಂತ ಹಾದಿ ಹಿಡೀತಿದ್ರು' ತರ್ಕ-ಕುತರ್ಕ ಹಾಸ-ಉಪಹಾಸ ನಡೆದವು"[೨೨]

ದೇಶಪಾಂಡೆಯನ್ನು ವಿದ್ಯಾರ್ಥಿಗಳು ಗೇಲಿ ಮಾಡುವ ಬಗೆ ಈ ಮೇಲಿನ ರೀತಿಯದು. ಕಾದಂಬರಿಯಲ್ಲಿ ದೇಶಪಾಂಡೆ ದೌರ್ಬಲ್ಯವುಳ್ಳವ, ವಿಷಯದ ಬಗ್ಗೆ ಹಿಡಿತವಿಲ್ಲ. ಆತ್ಮ ವಿಶ್ವಾಸದ ಕೊರತೆ ಎದ್ದು ಕಾಣುತ್ತದೆ. ವಿದ್ಯಾರ್ಥಿಗಳೇಕೆ ಶಿಕ್ಷಕರೊಡನೆ ಸಂಘರ್ಷಕ್ಕಿಳಿಯುತ್ತಾರೆಂದರೆ, ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಶಿಕ್ಷಕರು ಇದೇ ಲಕ್ಷಣಗಳನ್ನು ಹೊಂದಿರಬೇಕೆಂಬ ಸ್ಪಷ್ಟ ಕಲ್ಪನೆಯಿರುತ್ತದೆ. ತರಗತಿಯ ಯಾವ ಶಿಕ್ಷಕ ವಿದ್ಯಾರ್ಥಿಗಳ ಆದರ್ಶ ಶಿಕ್ಷಕನ ಕಲ್ಪನೆಗಳಿಗೆ ಹೊಂದಿಕೊಳ್ಳುವುದಿಲ್ಲವೋ ಅವನ ನಡುವೆ ಸಂಘರ್ಷ ಅನಿವಾರ್ಯವಾಗುತ್ತದೆ. ಇಲ್ಲಿನ ದೇಶಪಾಂಡೆಯು ವಿದ್ಯಾರ್ಥಿಗಳ ದೃಷ್ಟಿಗೆ ದುರ್ಬಲ ಶಿಕ್ಷಕನಾಗಿ ಕಾಣುವುದು ಇದೇ ಕಾರಣಕ್ಕೆ.

'ನಾಲ್ಕನೆಯ ಆಯಾಮ'ದಲ್ಲಿ ತರಗತಿಯಲ್ಲಿ ಶಿಕ್ಷಕರು ಕಥಾನಾಯಕನನ್ನು ಥಳಿಸಿದ್ದಕ್ಕಾಗಿ ಅವನು ಶಿಕ್ಷಕರನ್ನು ವಿರೋಧಿಸುತ್ತಾನೆ. ಇಲ್ಲಿಯ ಕಥಾನಾಯಕನು ಸಂವೇದನಾಶೀಲ, ಸ್ವಾಭಿಮಾನಿ, ಸೂಕ್ಷ್ಮ ಮನಸ್ಸಿನವನು. ತರಗತಿಯಲ್ಲಿ ಎಲ್ಲಾ ವಿದ್ಯಾರ್ಥಿಗಳ ಮುಂದೆ ಶಿಕ್ಷಕರು ಹೊಡೆದದ್ದು ಅವನಿಗೆ ಸರಿ ಕಾಣುವುದಿಲ್ಲ. 'ಆರ್ಗ್ಯಾಜಮ್' ಎಂಬ ಪದವನ್ನು ಅವನು ತರಗತಿಯಲ್ಲಿ ಕೂಗಿ ಹೇಳಿದ್ದನ್ನು ಶಿಕ್ಷಕರು ಸಹಿಸಿಕೊಳ್ಳುವುದಿಲ್ಲ. ಇನ್ನು ಚಿಕ್ಕವಯಸ್ಸಿನಲ್ಲಿಯೇ ಕೀಳು ಪ್ರವೃತ್ತಿಗಳನ್ನು ವಿದ್ಯಾರ್ಥಿಗಳು ಬೆಳೆಸಿಕೊಳ್ಳುವುದನ್ನು ಸಹಿಸಿಕೊಳ್ಳದ ಮನೋಭಾವದವರು. ಇಲ್ಲಿ ಇವರಿಬ್ಬರ ನಡುವೆ ಸಾಕಷ್ಟು ತೀವ್ರಸ್ವರೂಪವನ್ನೇ ತಲೆಮಾರು ಸಂಘರ್ಷವು ಪಡೆದುಕೊಂಡಿದೆ.

'ಪರಿಘ' ಕಾದಂಬರಿಯಲ್ಲಿ ಅರವಿಂದ ಮತ್ತು ಶಿಕ್ಷಕರ ನಡುವೆ ಸಂಘರ್ಷವು ನಡೆಯುತ್ತದೆ. ಅರವಿಂದ ತರಗತಿಯಲ್ಲಿ ತನ್ನ ಅಧಿಕಾರವನ್ನು ಪ್ರಯೋಗಿಸುವ ಶಿಕ್ಷಕರಿಗೆ ಉದ್ಧಟನಾಗಿ, ವಿಷಯದ ಬಗ್ಗೆ ಹಿಡಿತವಿಲ್ಲದಿರುವ, ವೈಚಾರಿಕತೆಯ ಕೊರತೆಯಿರುವ ಶಿಕ್ಷಕರಿಗೆ ತಲಹರಟೆಯಾಗಿ, ಅವನ ವ್ಯಕ್ತಿತ್ವವನ್ನು ತಮ್ಮೊಡನೆ ತೂಗಿ ನೋಡುವ ಶಿಕ್ಷಕರಿಗೆ ಮಹಾವ್ಯಕ್ತಿಯಾಗಿ ಕಾಣುತ್ತಾನೆ. ಇಲ್ಲಿ ಕಾದಮಬರಿಯು

ಅರವಿಂದನ ಪಾತ್ರವನ್ನು ಒಬ್ಬ ಪ್ರತಿಭಾವಂತ ವಿದ್ಯಾರ್ಥಿಯಾಗಿ ಚಿತ್ರಿಸುವುದಾದರೂ, ವಯಸ್ಸಿಗೆ ಮೀರಿದ ಪ್ರೌಢತೆ, ಪ್ರಬುದ್ಧ ನಡವಳಿಕೆಗಳು ಅಸಹಜವಾಗಿ ಕಾಣುತ್ತವೆ. ಪ್ರೌಢಶಾಲಾ ಹಂತದಲ್ಲಿ ಓದುತ್ತಿರುವ ಅರವಿಂದನಲ್ಲಿ ವಯಸ್ಕ ವ್ಯಕ್ತಿಯೊಬ್ಬನ ನಡವಳಿಕೆ ಆಲೋಚನೆಗಳನ್ನು ಕಾಣುತ್ತೇವೆ. ಬಾಲ ಸಹಜವಾದ ನಡವಳಿಕೆಯು ಎಲ್ಲಿಯೂ ಕಾಣುವುದಿಲ್ಲ. ಹೀಗಾಗಿ ಅರವಿಂದ-ಶಿಕ್ಷಕರ ನಡುವಿನ ಸಂಘರ್ಷವು ಅಸಹಜವಾಗಿ-ಓದುಗರ ಗಮನವನ್ನು ಸೆಳೆಯುವುದಿಲ್ಲ.

ಆದರೂ ತಲೆಮಾರು ಸಂಘರ್ಷವು ಕುಸುಮಾಕರರ ಕಾದಂಬರಿಗಳಲ್ಲಿ ವೈವಿಧ್ಯಮಯವಾಗಿ ಮೂಡಿಬಂದಿದ್ದು, ಕಾದಂಬರಿಗಳಿಗೆ ಒಂದು ರೀತಿಯ ವಿಶಿಷ್ಟತೆಯನ್ನು ತರುವಲ್ಲಿ ಸಫಲವಾಗಿದೆ.

**ಟಿಪ್ಪಣಿಗಳು**

೧. ಕುಸುಮಾಕರದೇವರ, ಗೆಣ್ಣೂರು, 'ಮುಗಿಯದ ಕತೆ', ಪು.೧-೨

೨. ಅದೇ, ಪು.೯೧

೩. ಅದೇ, 'ನಾಲ್ಕನೆಯ ಆಯಾಮ', ಪು.೯-೧೦

೪. ಅದೇ, ಪು.೨೩-೨೪

೫. ಅದೇ, 'ನಿರಿಂದ್ರಿಯ', ಪು.೪

೬. ಅದೇ, ಪು.೪೮

೭. ಅದೇ, 'ಬಯಲು-ಬಸಿರು', ಪು.೫೬

೮. ಅದೇ, 'ಮುಗಿಯದ ಕತೆ', ಪು.೭೦

೯. ಅದೇ, 'ನಿರಿಂದ್ರಿಯ', ಪು.೯

೧೦. ಅದೇ, 'ಮುಗಿಯದ ಕತೆ', ಪು.೮೭

೧೧. ಅದೇ, 'ನಿರಿಂದ್ರಿಯ', ಪು.೧೩೯

೧೨. ಅದೇ, 'ಮುಗಿಯದ ಕತೆ', ಪು.೧೨

೩

# ಕುಸುಮಾಕರರ ಕಾದಂಬರಿಗಳಲ್ಲಿ ವ್ಯಕ್ತಿವಿಶಿಷ್ಟತೆಯ ಸ್ವರೂಪ

## ವ್ಯಕ್ತಿವಿಶಿಷ್ಟತೆ ಎಂದರೇನು?

ಪ್ರಪಂಚದಲ್ಲಿನ ಪ್ರತಿಯೊಬ್ಬ ವ್ಯಕ್ತಿಯೂ ಅದ್ವಿತೀಯ. ಒಂದೇ ರೀತಿಯ ರೂಪ, ನಡವಳಿಕೆ ಹೊಂದಿರುವ ವ್ಯಕ್ತಿಗಳನ್ನು ನೋಡಲು ಸಾಧ್ಯವೇ ಇಲ್ಲ. ತದ್ರೂಪಿ ಯಮಳರಲ್ಲಿಯೂ ಕೂಡ ಶೇ.ನೂರರಷ್ಟು ಸಾಮ್ಯತೆಯು ಅಸಾಧ್ಯ ಒಂದೇ ಕುಟುಂಬದಲ್ಲಿ ಬೆಳೆದ ಮಕ್ಕಳು ಒಂದಕ್ಕಿಂತ ಮತ್ತೊಂದು ಭಿನ್ನವಾಗಿರುತ್ತವೆ. ಅವರ ಆಕಾರ, ಗಾತ್ರ, ಬುದ್ಧಿಶಕ್ತಿ, ಹವ್ಯಾಸ, ಪ್ರತಿಭೆ ಮುಂತಾದವುಗಳಲ್ಲಿ ವಿಶಿಷ್ಟತೆಯು ಕಂಡುಬರುತ್ತದೆ. ವ್ಯಕ್ತಿ ವಿಶಿಷ್ಟತೆಯು ಕೇವಲ ಮನುಷ್ಯನಿಗೆ ಮಾತ್ರ ಸೀಮಿತವಲ್ಲ. ಪ್ರತಿಯೊಂದು ಜೀವಿಗಳಲ್ಲಿಯೂ ಇದನ್ನು ಗುರ್ತಿಸಲು ಸಾಧ್ಯ. ವ್ಯಕ್ತಿವಿಶಿಷ್ಟತೆಯು ಪ್ರಕೃತಿಯಲ್ಲಿ ನಿರಂತರವಾಗಿ ಇರುವ ಜೈವಿಕ ವಾಸ್ತವವಾಗಿದೆ. ಜೀವ ಸಮುದಾಯ ಯಾವಾಗ ಭೂಮಿಯ ಮೇಲೆ ಆವಿರ್ಭವಿಸಿತೋ ಅಂದಿನಿಂದಲೇ ಜೈವಿಕ ವಿಶಿಷ್ಟತೆಯು ಆರಂಭಗೊಂಡಿದೆ. ಮನುಷ್ಯ ಸೃಷ್ಟಿಯಲ್ಲಿ ವಿಕಾಸಗೊಂಡ ಹಂತದಿಂದಲೇ ವ್ಯಕ್ತಿ ವಿಶಿಷ್ಟತೆಯು ಪ್ರಾರಂಭವಾಗಿದೆ. ವ್ಯಕ್ತಿವಿಶಿಷ್ಟತೆಯು ಸ್ವಾಭಾವಿಕವಾದದ್ದು ಮತ್ತು ನೈಸರ್ಗಿಕವಾದದ್ದು; ಪ್ರತಿಯೊಬ್ಬ ವ್ಯಕ್ತಿಗಳು ಒಬ್ಬರಿಗಿಂತ ಮತ್ತೊಬ್ಬರು ದೈಹಿಕವಾಗಿ, ಮಾನಸಿಕವಾಗಿ, ಸಂವೇದನಾತ್ಮಕವಾಗಿ, ಅಭಿರುಚಿಯಲ್ಲಿ, ಬೌದ್ಧಿಕವಾಗಿ ವಿಶಿಷ್ಟತೆಯನ್ನು ಪಡೆದಿರುತ್ತಾರೆ. ಇದನ್ನು ಜೈವಿಕ ನೆಲೆಯಲ್ಲಿ ವ್ಯಕ್ತಿವಿಶಿಷ್ಟತೆಯೆಂದು ಕರೆಯುತ್ತೇವೆ.

ಮಾನವ ಸಮಾಜವು ಸಾದೃಶ್ಯದ ಜೊತೆಗೆ ಭಿನ್ನತೆಯ ತತ್ವವನ್ನು ಆಧರಿಸಿ ನಿಂತಿದೆ. ಮನುಷ್ಯನ ಜೀವನವು ಪರಿಸರದಿಂದ ಪ್ರತ್ಯೇಕಗೊಂಡಿಲ್ಲ. ಪ್ರತಿಯೊಂದು ಜೀವಿಯ ಜೀವನವನ್ನು ನಿಯಂತ್ರಿಸುವ ಪ್ರಬಲಶಕ್ತಿಯಾಗಿದೆ ಪರಿಸರ. ಎಲ್ಲಾ ಸಸ್ಯ ಹಾಗೂ ಪ್ರಾಣಿಗಳಂತೆ ಮಾನವನು ಪರಸರದ ವರ್ಚಸ್ಸಿನ ಪರಿಧಿಯೊಳಗೆ ಸಿಲುಕಿಕೊಂಡಿದ್ದಾನೆ. ಇದು ಸಕಲ ಜೀವರಾಶಿಯನ್ನು ಆವರಿಸಿ, ವ್ಯಾಪಿಸಿ ಅದರ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರುತ್ತದೆ. ಪರಿಸರವು ನೈಸರ್ಗಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಬೇರೆ ಬೇರೆ ರೂಪಗಳಲ್ಲಿ ಮಾನವ ಜೀವನದ ಮೇಲೆ ಪ್ರಭಾವ ಬೀರುತ್ತದೆ. ಮಾನವ ಜೀವನದ ಹಲವಾರು ಮುಖಗಳ ಮೇಲೆ ಈ ಎಲ್ಲಾ ಬಗೆಯ ಪರಿಸರಗಳು ಪ್ರಭಾವ ಬೀರುತ್ತವೆ.

ಅನುವಂಶೀಯತೆ ಮತ್ತು ಪರಿಸರಗಳು ವ್ಯಕ್ತಿವಿಶಿಷ್ಟತೆಯನ್ನು ಹೇಗೆ ಉಂಟು ಮಾಡುತ್ತವೆ? ಎಂಬುದನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವುದು ಸರಿಯಲ್ಲ. ಇವೆರಡರ ಪ್ರಭಾವದ ಸಂಕೀರ್ಣ ಸಂಯೋಜನೆಯಿಂದಲೇ ವ್ಯಕ್ತಿವಿಶಿಷ್ಟತೆಯು ಆವಿರ್ಭವಿಸುತ್ತದೆ. ಒಂದು ಮಗುವಿನ ಜನನ ಪ್ರಕ್ರಿಯೆ ಆರಂಭವಾದಂದಿನಿಂದ

ಜನಿಸುವವರೆಗೂ ಅನುವಂಶೀಯತೆಯ ಪ್ರಭಾವ ಹೆಚ್ಚಾಗಿರುತ್ತದೆ. ಇಲ್ಲಿಯೂ ಪರಿಸರವನ್ನು ನಿರ್ಲಕ್ಷಿಸುವಂತಿಲ್ಲ. ಜನಿಸಿದ ನಂತರ ಅದರ ಮೇಲೆ ಪರಿಸರವು ಹೆಚ್ಚು ಪ್ರಭಾವ ಬೀರುತ್ತದೆ. ಅನುವಂಶೀಯತೆ ಮತ್ತು ಪರಿಸರಗಳು ವ್ಯಕ್ತಿವಿಶಿಷ್ಟತೆಯಲ್ಲಿ ಎರಡು ರಥದ ಗಾಲಿಗಳಿದ್ದಂತೆ. ಎರಡರಲ್ಲಿ ಯಾವುದನ್ನು ಅಲ್ಲಗಳೆಯುವಂತಿಲ್ಲ. ಅನುವಂಶೀಯತೆ ಮತ್ತು ಪರಿಸರಗಳಲ್ಲಿ ಯಾವುದು ಮುಖ್ಯ? ಎಂಬುದು ಬಿಡಿಸಲಾಗದ ಸಮಸ್ಯೆ. ಅನೇಕ ಮನಃಶಾಸ್ತ್ರಜ್ಞರಿಗೆ ಇಂದಿಗೂ ಇದೊಂದು ಜಿಜ್ಞಾಸೆಯ ವಿಷಯ. ಇದರ ಬಗ್ಗೆ ಚರ್ಚೆ ಮಾತ್ರ ಚಾಲ್ತಿಯಲ್ಲಿದೆ.

ವ್ಯಕ್ತಿವಿಶಿಷ್ಟತೆಯನ್ನುಂಟು ಮಾಡುವಲ್ಲಿ ಅನುವಂಶೀಯತೆ ಮತ್ತು ಪರಿಸರಗಳ ಪಾತ್ರ ಅನನ್ಯವಾದುದು. ಇದು ಸಂಪೂರ್ಣವಾಗಿ ಮನಃಶಾಸ್ತ್ರೀಯ ದೃಷ್ಟಿಕೋನ. ಆದರೆ, ವ್ಯಕ್ತಿ ವಿಶಿಷ್ಟತಾವಾದವು ಆಧುನಿಕ ಸಿದ್ಧಾಂತವಾಗಿರುವುದರಿಂದ ಸಮಾಜಕೇಂದ್ರಿತ ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ನಡೆದಿದೆ. ನಗರ ಪರಿಸರವು ವ್ಯಕ್ತಿವಿಶಿಷ್ಟತೆಯನ್ನು ಉಂಟು ಮಾಡುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಈ ನೆಲೆಯಲ್ಲಿ ನವ್ಯ ಸಾಹಿತ್ಯದಲ್ಲಿ ಇದು ಒಂದು ಮೌಲ್ಯವಾಗಿ ಮೂಡಿಬಂದಿದೆ. ನಗರದ ಸಾಮುದಾಯಿಕ ಜೀವನದಲ್ಲಿ ತನ್ನನ್ನು ಉಳಿದವರಿಗಿಂತ ಭಿನ್ನವೆಂದು ವ್ಯಕ್ತಿ ಭಾವಿಸುತ್ತಾನೆ. ಜೊತೆಗೆ ಆಧುನಿಕತೆಯು ಉಂಟು ಮಾಡಿದ ನಾಗರಿಕ ಜೀವನದಲ್ಲಿ ವ್ಯಕ್ತಿಕೇಂದ್ರಿತ ಮೌಲ್ಯಗಳನ್ನು ಬಿತ್ತುತ್ತದೆ. ಇನ್ನೊಂದು ನೆಲೆಯಲ್ಲಿ ವ್ಯಕ್ತಿವಿಶಿಷ್ಟತೆಯು ಆಧುನಿಕತೆಯ ಲಕ್ಷಣವಾಗಿ ಬರುತ್ತದೆ. ಮತ್ತು ಆಧುನಿಕವಿಚಾರವಾದವು ವ್ಯಕ್ತಿಯಲ್ಲಿ ವ್ಯಕ್ತಿವಿಶಿಷ್ಟತೆಯ ಮೌಲ್ಯವನ್ನು ಬಿತ್ತುತ್ತದೆ. ಮುಂದಿನ ಶೀರ್ಷಿಕೆಯಡಿಯಲ್ಲಿ ಇದನ್ನು ವಿಸ್ತೃತವಾಗಿ ಚರ್ಚಿಸಲಾಗಿದೆ.

## ವ್ಯಕ್ತಿವಿಶಿಷ್ಟತೆ ಮತ್ತು ನಗರ ಜೀವನ

ಬ್ರಿಟಿಷರ ವಸಾಹತುಶಾಹಿ ಆಳ್ವಿಕೆಗೆ ಭಾರತವು ಒಳಗಾದ ಮೇಲೆ ಆಧುನಿಕತೆಯ ಗಾಳಿಯು ಇಲ್ಲಿ ಬೀಸಿತು. ಇಂಗ್ಲೀಷ್ ವಿದ್ಯಾಭ್ಯಾಸಕ್ರಮವು ಭಾರತೀಯ ಯುವಸಮುದಾಯದಲ್ಲಿ ವೈಚಾರಿಕ ಜಾಗೃತಿಯನ್ನುಂಟು ಮಾಡಿತು. ವಿವಿಧ ಬಗೆಯ ಕೈಗಾರಿಕೆಗಳು ಸ್ಥಾಪನೆಯಾಗತೊಡಗಿದ ಮೇಲೆ ನಗರಗಳು ಬೆಳೆಯತೊಡಗಿದವು. ಮಧ್ಯಮ ವರ್ಗದ ಬಹುಪಾಲು ಜನರು ನಗರ ಜೀವನದಿಂದ ಆಕರ್ಷಿತರಾಗಿ ಗ್ರಾಮಾಂತರ ಪ್ರದೇಶದಿಂದ ವಲಸೆ ಬರತೊಡಗಿದರು. ಕುಸುಮಾಕರರ ಕಾದಂಬರಿಗಳಲ್ಲಿಯ ಬಹುತೇಕ ಎಲ್ಲಾ ನಾಯಕರು ಈ ರೀತಿ ವಲಸೆ ಬಂದವರೇ. ಆಧುನಿಕ ವಿಚಾರವಾದದ ಸಂಪರ್ಕದಿಂದ ಇವರು ವ್ಯಕ್ತಿವಿಶಿಷ್ಟವಾದದ ಮೌಲ್ಯಗಳನ್ನು ಬೆಳೆಸಿಕೊಂಡರು. ಇಲ್ಲವೇ, ಅದರಿಂದ ಪ್ರಭಾವಿತರಾದರು. ಕಾದಂಬರಿಗಳ ಪ್ರತಿಯೊಬ್ಬ ನಾಯಕನು ಕೂಡ ತಾನೊಬ್ಬ ಸಂವೇದನಾಶೀಲ ವ್ಯಕ್ತಿ, ಸೃಷ್ಟಿಯಲ್ಲಿ ತಾನೊಬ್ಬ ವಿಶಿಷ್ಟವಾದವನು, ಅನ್ಯರಿಗಿಂತ ಭಿನ್ನ ಎಂದೇ ಆಲೋಚಿಸುತ್ತಾನೆ. ಇಲ್ಲಿನ ಸಾಂಪ್ರದಾಯಿಕ ಪರಂಪರಾಗತ ಮೌಲ್ಯಗಳನ್ನು ಒಪ್ಪಿಕೊಳ್ಳದೆ ಅವುಗಳೊಡನೆ ಸಂಘರ್ಷಕ್ಕಿಳಿಯುತ್ತಾನೆ. ಆದ್ದರಿಂದಲೇ ಕುಸುಮಾಕರರ ಕಾದಂಬರಿಗಳ ಎಲ್ಲಾ ನಾಯಕರು ಮಾನಸಿಕ ಅಸ್ವಸ್ಥರು, ಚಿಂತನಶೀಲರು, ಅಂತರ್ಮುಖಿಗಳು. ಇತರ ಜನಸಮುದಾಯದೊಡನೆ ಹೊಂದಿಕೊಳ್ಳಲಾಗದೆ

ಒಂಟಿತನ, ಅನಾಥಪ್ರಜ್ಞೆಯಿಂದ ನರಳುತ್ತಾರೆ. ಸಮುದಾಯದಲ್ಲಿ ತಮ್ಮ ವಿಶಿಷ್ಟಹಕ್ಕುಗಳಿಗಾಗಿ ಹೋರಾಡುತ್ತಾರೆ. ಮಾನಸಿಕ ದ್ವಂದ್ವಕ್ಕೆ ಒಳಗಾಗುತ್ತಾರೆ. 'ಮುಗಿಯದ ಕತೆ'ಯಲ್ಲಿನ ದೇಶಪಾಂಡೆಯಿರಬಹುದು, 'ನಾಲ್ಕನೆಯ ಆಯಾಮ'ದ ಮನೋಜ್ ಕುಮಾರ್, 'ನಿರಿಂದ್ರಿಯ'ದ ರೊಳ್ಳಿ, 'ಪರಿಘದ ಅಜೇಯ', 'ಬಯಲು-ಬಸಿರು' ಕಾದಂಬರಿಯ ಅನಿಕೇತಾನಂದ ಇವರೆಲ್ಲರೂ ನಗರ ಜೀವನದಿಂದ ಪ್ರಭಾವಿತರಾದವರು. ಮತ್ತು ವ್ಯಕ್ತಿವಿಶಿಷ್ಟತಾ ಮೌಲ್ಯಗಳಿಂದ ಜಾಗೃತರಾದವರು. ನಗರ ಪರಿಸರಕ್ಕನುಗುಣವಾಗಿ ಅವರ ಪ್ರಜ್ಞೆಯು ವಿಕಾಸವಾಗುವುದರಿಂದ ಸಾಂಪ್ರದಾಯಿಕ ಮೌಲ್ಯಗಳನ್ನೊಳಗೊಂಡ ಜನರಿಂದ ದೂರವಾಗಿ ಒಂಟಿಯಾಗಿಯೇ ಬದುಕುತ್ತಾರೆ.

ಹೀಗೆ ಆಧುನಿಕ ಬದುಕಿನಲ್ಲಿ ಒಂಟಿಯಾಗಿರುವ ಮನುಷ್ಯನನ್ನು ಕುರಿತು ಹುಟ್ಟಿರುವ ನವ್ಯ ಸಾಹಿತ್ಯವು ಸಹಜವಾಗಿ ವ್ಯಕ್ತಿಗತಮೌಲ್ಯಗಳನ್ನು ಪ್ರತಿಪಾದಿಸುತ್ತದೆ. ಆದರೆ ನವ್ಯಸಾಹಿತ್ಯದಲ್ಲಿ ಚರ್ಚೆ ಮಾಡುವ ವ್ಯಕ್ತಿವಿಶಿಷ್ಟತೆಯು ಜೈವಿಕನೆಲೆಯ ಭಿನ್ನತೆಯನ್ನು ಕುರಿತದ್ದಲ್ಲ. ಅದು ಆಲೋಚನ ಕ್ರಮಕ್ಕೆ ಸಂಬಂಧಿಸಿದ್ದು. ಮೌಲ್ಯಕಲ್ಪನೆಯಾಗಿರುವ, ಇದು ಆಧುನಿಕ ನಾಗರಿಕತೆಯ ಕೊಡುಗೆಯೂ ಹೌದು. ಆದ್ದರಿಂದಲೇ ವ್ಯಕ್ತಿ ವಿಶಿಷ್ಟತೆ ಮತ್ತು ನಗರಜೀವನ ನವ್ಯ ಸಾಹಿತ್ಯದಲ್ಲಿ ಒಂದಕ್ಕೊಂದು ತಳುಕು ಹಾಕಿಕೊಂಡಿವೆ. ಇದನ್ನು ಪ್ರಮುಖ ಸಂಗತಿಯಾಗಿಟ್ಟುಕೊಂಡು ಮಾನವ ಮನಸ್ಸಿನ ವಿಶ್ಲೇಷಣೆಯನ್ನು ಕುಸುಮಾಕರರ ಕಾದಂಬರಿಗಳು ಶೋಧಿಸುತ್ತವೆ.

## ಕಾದಂಬರಿಗಳಲ್ಲಿ ವ್ಯಕ್ತಿವಿಶಿಷ್ಟತೆಯ ಸ್ವರೂಪ

ಕುಸುಮಾಕರರ ಕಾದಂಬರಿಗಳಲ್ಲಿ ವ್ಯಕ್ತಿವಿಶಿಷ್ಟತೆ ಮತ್ತು ನಗರಜೀವನಕ್ಕೂ ಹತ್ತಿರದ ಸಂಬಂಧವಿದೆ. ಇಲ್ಲಿಯ ಜನರ ಜೀವನದ ಮೇಲೆ ನಗರಪರಿಸರದ ಅಚ್ಚಳಿಯದ ಪ್ರಭಾವವನ್ನು ಕಾಣಬಹುದು. 'ಮುಗಿಯದ ಕತೆ'ಯಲ್ಲಿನ ದೇಶಪಾಂಡೆ ನಗರ ಪರಿಸರದಲ್ಲಿ ಬದುಕಿದವನು. ಅವನ ಆರ್ಥಿಕ ಪರಿಸ್ಥಿತಿ ಅವನ ಮಾನಸಿಕ ದ್ವಂದ್ವಕ್ಕೆ ಕಾರಣವಾಗುತ್ತದೆಯಾದರೂ ಅದೇ ಅಂತಿಮವಲ್ಲ. ಕಾದಂಬರಿಯ ಆದಿಯಿಂದ ಅಂತ್ಯದವರೆಗೂ ಹಲವಾರು ರೀತಿಯ ಮಾನಸಿಕ ಉದ್ವೇಗಗಳಿಗೆ ದೇಶಪಾಂಡೆ ಒಳಗಾಗುತ್ತಾನೆ. ತನ್ನಲ್ಲಿರುವ ಅಗಾಧವಾದ ಕೀಳರಿಮೆಯಿಂದ ಹೊರಬರಲು ಪ್ರಯತ್ನಿಸುತ್ತಾನೆ. ದೇಶಪಾಂಡೆಯ ಈ ರೀತಿಯ ಕೀಳರಿಮೆಗೆ, ಮನೋದ್ವಂದ್ವಕ್ಕೆ ನಗರಪರಿಸರವು ಕಾರಣವಾದರೂ, ಯಾವ ರೀತಿಯ ಸನ್ನಿವೇಶಗಳು ದೇಶಪಾಂಡೆಯ ವ್ಯಕ್ತಿತ್ವವನ್ನು ಈ ರೀತಿಯಾಗಿ ಮಾರ್ಪಡಿಸಿದವು? ಎಂಬುದಕ್ಕೆ ಕಾದಂಬರಿಯಲ್ಲಿ ಸ್ಪಷ್ಟ ಕಾರಣಗಳಿಲ್ಲ. ಅದನ್ನು ಕುರಿತು ಸಿ.ಎನ್.ರಾಮಚಂದ್ರನ್‌ರವರ ಅಭಿಪ್ರಾಯವಿದು.

> "ದೇಶಪಾಂಡೆಯ ತೀವ್ರ ಕೀಳರಿಮೆಗೆ ಕೃತಿಯಲ್ಲಿ ಯಾವುದೇ ಕಾರಣವಿಲ್ಲ. ಬಿ.ಎಡ್ ಮುಗಿದ ನಂತರ ಅವನಲ್ಲಿ ಆಗುವ ಆಗಾಧ ಪರಿವರ್ತನೆಯನ್ನು ಒಪ್ಪಲು ಕಷ್ಟವಾಗುತ್ತದೆ. ಅವನ ಮಿತ್ರ ದೇಸಾಯಿಯ ಮತ್ತು ಸರಸ್ವತಿಯ ನಡುವಿನ ಸಂಬಂಧದ ಸ್ವರೂಪ ಕೊನೆಗೂ ಅಸ್ಪಷ್ಟವಾಗಿಯೇ ಉಳಿಯುತ್ತದೆ... ಇತ್ಯಾದಿ."[೧]

ದೇಶಪಾಂಡೆಯ ವ್ಯಕ್ತಿತ್ವವನ್ನು ಅವನ ಸುತ್ತಲಿನ ಪರಿಸರವು ಯಾವ ರೀತಿಯಲ್ಲಿ ಪ್ರಭಾವಿಸಿದೆ?, ಯಾವ ಕಾರಣಕ್ಕಾಗಿ ಅವನಲ್ಲಿ ಅಗಾಧವಾದ ಕೀಳರಿಮೆಯು ಉಂಟಾಗಿದೆ? ಎಂಬುದನ್ನು ಕಾದಂಬರಿಯು ಯಶಸ್ವಿಯಾಗಿ ಚಿತ್ರಿಸಿಲ್ಲ. ಬಹುಶಃ 'ಮುಗಿಯದ ಕತೆ'ಯು ಕುಸುಮಾಕರರ ಮೊದಲ ಕಾದಂಬರಿಯಾಗಿರುವುದರಿಂದ ಈ ರೀತಿಯಾಗಿದೆ. ಆ ನಂತರದ ಕಾದಂಬರಿಗಳು ಈ ಕೊರತೆಯನ್ನು ತುಂಬಿಕೊಳ್ಳುವಲ್ಲಿ ಯಶಸ್ವಿಯಾಗಿವೆ.

'ನಾಲ್ಕನೆಯ ಆಯಾಮ'ದ ನಾಯಕನಿರಬಹುದು, 'ನಿರಿಂದ್ರಿಯ'ದ ರೊಳ್ಳಿಯಿರಬಹುದು, 'ಪರಿಘ'ದಲ್ಲಿನ ಅಜೇಯ, 'ಬಯಲು-ಬಸಿರುನಲ್ಲಿಯ ನಾರ್ಮ್ಯಾನ್ - ಪ್ರತಿಯೊಬ್ಬರೂ ಮಧ್ಯಮ ವರ್ಗದ ಪರಿಸರದಲ್ಲಿ ಬದುಕನ್ನು ನಡೆಸಿದವರು. ನಗರದ ಪರಿಸರವು ಇವರ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರಿರುವುದು ಕಾದಂಬರಿಗಳಲ್ಲಿ ನಮಗೆ ಸ್ಪಷ್ಟವಾಗಿ ಗೋಚರಿಸುತ್ತದೆ. ಕಾದಂಬರಿಗಳಲ್ಲಿನ ಮೇಲ್ಕಂಡ ಎಲ್ಲಾ ಪಾತ್ರಗಳು, ನಗರಪರಿಸರದ ಪ್ರಭಾವದಿಂದ ಬದುಕಿನಲ್ಲಿ ಯಾಂತ್ರಿಕತೆಯನ್ನು ಅನುಭವಿಸಿದವರು. ಏಕಾಂಗಿತನ, ಅನಾಥಪ್ರಜ್ಞೆ, ಮಾನಸಿಕ ಕ್ಷೋಭೆಗೆ ತುತ್ತಾದವರು. ಮಾನಸಿಕ ಶಾಂತಿ ಪಡೆಯುವುದಕ್ಕಾಗಿ ಅದನ್ನು ಹುಡುಕುವ ಪ್ರಯೋಗಶೀಲರು. ತಮ್ಮಲ್ಲಿ ಉಂಟಾಗುವ ಮಾನಸಿಕ ದ್ವಂದ್ವಗಳಿಗೆ, ಭಾವನೆಗಳ ಏರಿಳಿತಗಳಿಗೆ ತಾವೇ ಕಾರಣಗಳನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. ಈ ಎಲ್ಲಾ ಪಾತ್ರಗಳು ತಮ್ಮ ಮನಸ್ಸನ್ನು ತಾವೇ ವಿಶ್ಲೇಷಿಸಿಕೊಳ್ಳಲು ಪ್ರಯತ್ನಿಸುತ್ತವೆ. ಓದುಗರಿಗೆ ಇವು ತಮ್ಮ ವ್ಯಕ್ತಿತ್ವವನ್ನು ವಿಶ್ಲೇಷಣೆ ಮಾಡಿಕೊಳ್ಳುವ ಸ್ವಯಂ ಮೌಲ್ಯಮಾಪಕರಾಗಿ ಕಾಣುತ್ತವೆ.

'ನಾಲ್ಕನೆಯ ಆಯಾಮ'ದಲ್ಲಿ ಕಥಾನಾಯಕನ ಮಾನಸಿಕ ಏರಿಳಿತಗಳಿಗೆ ನಗರಪರಿಸರವು ಪ್ರಮುಖ ಕಾರಣವಾಗಿ ಕಾಣುತ್ತದೆ. ಆಧುನಿಕತೆಯು ಮನೋಜ್ ಕುಮಾರನ ಮೇಲೆ ಪ್ರಭಾವ ಬೀರಿದೆ. ವ್ಯಕ್ತಿವಿಶಿಷ್ಟತಾ ಮೌಲ್ಯಪ್ರಜ್ಞೆಯು ಅವನಲ್ಲಿ ಬೆಳೆದಿದೆ. ಆದ್ದರಿಂದಲೇ ಅವನು ತಾನು ವಿಶೇಷ ಸಾಮರ್ಥ್ಯವಿದ್ದರೂ ತನ್ನನ್ನು ಯಾರು ಗುರುತಿಸುತ್ತಿಲ್ಲ ಎಂದು ಚಡಪಡಿಸುತ್ತಾನೆ. ಆಧುನಿಕವಾದ ಬಯಕೆಗಳ ಈಡೇರಿಕೆಗೆ ಕುಟುಂಬದಲ್ಲಿ ಹಣದ ಕೊರತೆ, ಮತ್ತೊಂದೆಡೆ ತಂದೆಯು ಬೇಗ ಉದ್ಯೋಗಕ್ಕೆ ಇವನನ್ನು ಕಳುಹಿಸಿ ಆರ್ಥಿಕ ಭಾರ ಕಡಿಮೆ ಮಾಡಿಕೊಳ್ಳುವ ಉದ್ದೇಶ ಹೊಂದಿರುತ್ತಾನೆ. ಆದರೆ ಅದು ಅವನಿಗೆ ಇಷ್ಟವಾಗುವುದಿಲ್ಲ. ಕೆಲವು ಸಮಯ ಮಾನಸಿಕ ಏರಿಳಿತಗಳಿಗೆ ಒಳಗಾದಾಗ ಭಾರತೀಯ ಸಂಸ್ಕೃತಿಯೇ ಅವನಿಂದ ವಿಮರ್ಶೆಗೊಳಪಡುತ್ತದೆ.

> "ನಮ್ಮ ಸಂಸ್ಕೃತಿಯೇ ಹಾಳು. ಅದನ್ನು ಮಾಡಬೇಡ ಇದನ್ನೂ ಮಾಡಬೇಡ. ಸಚಿತ್ರ ಇಂಗ್ಲೀಷ್ ಪತ್ರಿಕೆಗಳಲ್ಲಿ ಬರುವ ಚಿತ್ರಗಳನ್ನವನು ನೋಡಿದ್ದಾನೆ. 'ವರ್ಲ್ಡ್ ಬಾಯ್ ನಾಯಿಟ್ ' 'ಪ್ಯಾರಿಸ್ ಬಾಯ್ ನಾಯಿಟ್' ಏನು ಅದ್ಭುತ ಚಿತ್ರಗಳವು. ಇಲ್ಲಿ ಸ್ಕರ್ಟ್ ಹಾಕಿದರೇ ಗಾಬರಿಯಾಗುವ ಜನ. ಕೂಪಮಂಡೂಕ. ಏಕೆ ಕುಡಿಯಬಾರದು? ಅವನು ಕುಡಿತದ ದೃಶ್ಯಗಳನ್ನು ಚಲನಚಿತ್ರಗಳಲ್ಲಿ ಮಾತ್ರ ನೋಡಿದ್ದಾನೆ. ಆದರೆ ಅವನಿಗೆ ಅವಾಸ್ತವ ಎನ್ನಿಸಿವೆ. ಚರ್ಚಿಲ್ ತುಂಬ ಕುಡಿಯುತ್ತಿದ್ದನಂತೆ. ಆದರೆ ಅವನು ಸಿನಿಮಾದ ನಾಯಕನಂತೆ

ಸ್ಮೃತಿ ತಪ್ಪಿ ದುರಂತಕರವಾದ ನಿರ್ಣಯಗಳನ್ನು ತೆಗೆದುಕೊಂಡ ದಾಖಲೆಯಿಲ್ಲ. ಎಂತಹ ಆರೋಗ್ಯವನ್ನನುಭವಿಸಿದನವ. ಬಾಯಿಂದ ಸಿಗರೇಟು ತಪ್ಪಿದ ಕ್ಷಣವೇ ಇಲ್ಲ. ನಮ್ಮ ಪ್ರಿನ್ಸಿಪಾಲನೊ, ಮಾತೆತ್ತಿದರೆ-ಸಿಗರೇಟು ಸೇದಬಾರದು- ಅಮೇರಿಕೆ ಬ್ರಿಟನ್ ಗಳಲ್ಲಿ ತಂಬಾಕಿನ ವಿಷಯದಲ್ಲಿ ಸಂಶೋಧನೆಯಾಗಿದೆ. ಅದು ಆರೋಗ್ಯಕ್ಕೆ ಅಹಿತಕರ. ದೂರದೃಷ್ಟಿಯೇ ಇಲ್ಲ. ಭಾರತೀಯರ ಹಣಬರಹವೇ ಇಷ್ಟು. ನೀತಿ. ನೀತಿ. ದೌರ್ಬಲ್ಯದ ಪರಮಾವಧಿ."[೨]

-ಇಲ್ಲಿ ಕಥಾನಾಯಕ ಆಧುನಿಕತೆಯ ಗಾಳಿಗೆ ತನ್ನನ್ನು ಒಡ್ಡಿಕೊಂಡಿದ್ದಾನೆ. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ ಅವನ ಮೇಲೆ ಆಗಿದೆ. ಆದರೆ ಈ ಸಮಯದಲ್ಲಿ ಭಾರತದ ಪರಿಸ್ಥಿತಿ ಪಶ್ಚಿಮದ ಪರಿಸ್ಥಿತಿಯಂತಿದೆಯೇ? ಅಷ್ಟು ಆರ್ಥಿಕಾಭಿವೃದ್ಧಿ ತಮ್ಮಲ್ಲಿ ಆಗಿದೆಯೇ,? ಆಧುನಿಕತೆಯು ಭಾರತೀಯ ಸಮುದಾಯದ ಎಲ್ಲರ ಮೇಲೂ ಪ್ರಭಾವ ಬೀರಿದೆಯೇ? ಮುಂತಾದ ವಾಸ್ತವದ ಅರಿವು ಅವನಿಗಿಲ್ಲ. ಇವನಿಗೆ ಭಿನ್ನ ದೃಷ್ಟಿಕೋನ ಹೊಂದಿರುವವರನ್ನು, ಇವನ ಬಯಕೆಗಳಿಗೆ ಅಡ್ಡಿಪಡಿಸುವವರನ್ನು ವೈರಿಯೆಂದೇ ಪರಿಗಣಿಸುತ್ತಾನೆ. ಈ ಮೇಲಿನ ಉಲ್ಲೇಖದಲ್ಲಿ ಕಥಾನಾಯಕ ಅಂಧದೃಷ್ಟಿಕೋನದಲ್ಲಿ ಆಧುನಿಕತೆಗೆ ಒಳಗಾದಂತೆ ಕಾಣುತ್ತದೆ. ಅವನಲ್ಲಿ ವೈಚಾರಿಕತೆಯ ಕೊರತೆಯು ಎದ್ದು ಕಾಣುವ ಅಂಶ. ಇದಕ್ಕೆ ಕಾರಣ ಅವನ ವಯಸ್ಸು ಚಿಕ್ಕದು. ಅನುಭವಗಳ ಕೊರತೆಯು ಸಾಕಷ್ಟಿದೆ. ಆಧುನಿಕತೆಯ ಸಂಪರ್ಕದ ಮೊದಲ ಹಂತದಲ್ಲಿ ಭಾರತೀಯ ಯುವ ಸಮುದಾಯ ಪಾಶ್ಚಾತ್ಯ ಸಂಸ್ಕೃತಿಯನ್ನು ಗ್ರಹಿಸುವುದರಲ್ಲಿಯೇ ದೋಷವಿದೆ ಎಂಬ ಅಂಶವನ್ನು ಕಾದಂಬರಿಯು ಸೂಕ್ಷ್ಮವಾಗಿ ಹೇಳುತ್ತದೆ. ಇಲ್ಲಿ ಚರ್ಚಿಲ್ ಕುಡಿಯುವುದು, ಸಿಗರೇಟ್ ಸೇದುವುದು. ಇಂಗ್ಲೀಷ್ ಹುಡುಗಿಯರು ಧರಿಸುವ ಬಟ್ಟೆಗಳು, ಕಥಾನಾಯಕನನ್ನು ಆಕರ್ಷಿಸಿವೆಯೇ ಹೊರತು ಚರ್ಚಿಲ್‌ನ ವಿಚಾರಗಳು, ಅಂತರರಾಷ್ಟ್ರೀಯ ಮಟ್ಟದ ರಾಜಕಾರಣದಲ್ಲಿ ಅವನು ವಹಿಸಿದ ಪಾತ್ರ, ಅವನ ವಿದೇಶಾಂಗ ನೀತಿ ಕಥಾನಾಯಕನ ಗಮನಕ್ಕೂ ಬಂದಿಲ್ಲ. ಇಲ್ಲಿನ ಕಥಾನಾಯಕ ವ್ಯಕ್ತಿವಿಶಿಷ್ಟತಾಪ್ರಜ್ಞೆಯನ್ನು ಹೊಂದಿದ್ದಾನೆ. ಆಧುನಿಕವಿಚಾರವಾದದ ಪ್ರಭಾವಕ್ಕೆ ಒಳಗಾಗಿದ್ದಾನೆ. ಆದರೆ ಅದರ ಗ್ರಹಿಕೆಯಲ್ಲಿರುವ ದೋಷದಿಂದಲೇ ತನ್ನ ಬದುಕಿನಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಮತ್ತು ಪರಂಪರಾಗತ ಮೌಲ್ಯಗಳು ಈತನೊಂದಿಗೆ ಸಂಘರ್ಷಕ್ಕಿಳಿಯುತ್ತವೆ. ವ್ಯಕ್ತಿವಿಶಿಷ್ಟತೆಯನ್ನು ಸ್ಥಾಪಿಸುವುದರಲ್ಲಿ ವಿಫಲನಾಗಿ, ಕಥಾನಾಯಕನ ಮನಸ್ಸು ದ್ವಂದ್ವಕ್ಕೆ ಒಳಗಾಗಿ ಮಾನಸಿಕಅಸ್ವಸ್ಥತೆಯನ್ನು ಪಡೆಯುತ್ತದೆ. ಆದ್ದರಿಂದ ನಾಯಕನು ವ್ಯಕ್ತಿವಿಶಿಷ್ಟತೆಯನ್ನು ತೋರುವಲ್ಲಿ ಯಾವ ಅಂಶಗಳು ಅವನಿಗೆ ಅಡ್ಡಿಪಡಿಸಿದವೋ, ತಾನೊಬ್ಬ ಬೇರೆಯಾದ ವ್ಯಕ್ತಿ ಎಂದು ಗುರುತಿಸಿಕೊಳ್ಳಲು ಅಡ್ಡಿಬಂದ ಎಲ್ಲದರ ಮೇಲೆಯೂ ಆತ ಮಾನಸಿಕವಾಗಿ ಬಂಡೇಳುತ್ತಾನೆ.

"ತಾನು ಇಂದಿನಿಂದ ಬೆನ್ನುಲುಬಿಲ್ಲದ ಪ್ರಾಣಿಯಂತೆ ವರ್ತಿಸುತ್ತಿದ್ದೇನೆ. ಕಿಲಕಿಲ ನಕ್ಕನೆ? ಕುಣಿದನೆ? ಹಾರಾಡಿದನೆ ಊಹುಂ. ಇಂದಿನಿಂದ ನಾನೊಬ್ಬ ಬೇರೆಯೇ ವ್ಯಕ್ತಿ. ದಬ್ಬಾಳಿಕೆಯ ವಿರುದ್ಧ, ಅನ್ಯಾಯದ ವಿರುದ್ಧ ನಾನು ಬಂಡೇಳುತ್ತೇನೆ. ಇಂದಿನಿಂದ ನಾನು ನನ್ನ ಸ್ವರೂಪವನ್ನು ತಿಳಿದುಕೊಂಡೆ. ಏನು ಮಾಡಬಹುದು? ಮೊದಲು ಸ್ನೇಹಿತನ ಭಾರವನ್ನು

ತೆಗೆಯುತ್ತೇನೆ. ತಂದೆಯ ಅಧಿಕಾರವನ್ನು ಕಿತ್ತೊಗೆಯುತ್ತೇನೆ. ತಾಯಿಯ ಮಮತೆಯ ಬಲೆಯನ್ನು ಕತ್ತರಿಸಿ ಹಾಕುತ್ತೇನೆ. ಸಂಸ್ಕೃತಿಯ ವಿರುದ್ಧವೇ ಹೋರಾಟ ಹೂಡುತ್ತೇನೆ."[೩]

'ನಿರಿಂದ್ರಿಯ' ಕಾದಂಬರಿಯಲ್ಲಿನ ರೊಳ್ಳಿ, 'ಪರಿಘ'ದ ಅಜೇಯ ಇವರೆಲ್ಲರೂ ನಗರಜೀವನವನ್ನು ಅನುಭವಿಸಿದವರು. ಮಧ್ಯಮವರ್ಗಕ್ಕೆ ಸೇರಿದವರು. ಮಾನಸಿಕವಾಗಿ ಸಂವೇದನಾಶೀಲರು. ಆಧುನಿಕ ವಿಚಾರವಾದ ಮತ್ತು ವ್ಯಕ್ತಿವಿಶಿಷ್ಟತಾ ಮೌಲ್ಯಗಳಿಂದ ಪ್ರಭಾವಿತರಾದವರು. ಮಾನಸಿಕವಾಗಿ ಸಾಂಪ್ರದಾಯಿಕ ಮೌಲ್ಯಗಳೊಡನೆ ಹೊಂದಿಕೊಳ್ಳಲಾಗದೆ ಮಾನಸಿಕ ದ್ವಂದ್ವಕ್ಕೆ ಒಳಗಾದವರು. ಒಂಟಿತನ ಮತ್ತು ಅನಾಥಪ್ರಜ್ಞೆಯಿಂದ ಜೀವನದಲ್ಲಿ ರಿಕ್ತತೆಯನ್ನು ಅನುಭವಿಸಿದವರು. ತಮ್ಮ ವ್ಯಕ್ತಿವಿಶಿಷ್ಟತೆಯನ್ನು ಪ್ರತಿಷ್ಠಾಪಿಸಿಲು ಹೋರಾಡಿ ವಿಫಲರಾಗಿ ಮಾನಸಿಕ ಅಸ್ವಸ್ಥರಾಗಿ ನರಳಿದವರು.

'ನಾಲ್ಕನೆಯ ಆಯಾಮ' 'ನಿರಿಂದ್ರಿಯ' ಮತ್ತು 'ಪರಿಘ' ಕಾದಂಬರಿಯಲ್ಲಿ ವ್ಯಕ್ತಿ ವಿಶಿಷ್ಟತೆಗೆ ಹಿನ್ನೆಲೆಯಾಗಿ ಒಂದೇ ರೀತಿಯ ಪರಿಸರವನ್ನು ಕಾಣಬಹುದು. ಬಹುತೇಕವಾಗಿ ನಗರ ಪರಿಸರ, ಆಧುನಿಕ ವಿಚಾರವಾದ, ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ, ಸಮೂಹಕ್ಕಿಂತ ವ್ಯಕ್ತಿಯು ಭಿನ್ನವೆಂಬ ವ್ಯಕ್ತಿವಿಶಿಷ್ಟತಾ ನೆಲೆಯಲ್ಲಿನ ಆಲೋಚನೆ ಎಲ್ಲಾ ಕಾದಂಬರಿಗಳಲ್ಲಿಯೂ ಕಂಡುಬರುತ್ತವೆ.

ಆದರೆ 'ಬಯಲು-ಬಸಿರು' ಕಾದಂಬರಿಯು ಇವುಗಳಿಗಿಂತ ಸ್ವಲ್ಪ ಭಿನ್ನ ನೆಲೆಯಲ್ಲಿ ಹುಟ್ಟಿಕೊಂಡ ಕಾದಂಬರಿಯಾಗಿದೆ. ಕುಸುಮಾಕರರ ಎಲ್ಲಾ ಕಾದಂಬರಿಗಳ ಹಿಂದೆ ವ್ಯಕ್ತಿ ಕೇಂದ್ರಿತ ಮೌಲ್ಯ ಕೆಲಸ ಮಾಡಿದೆ. ಪ್ರಾರಂಭದ ನಾಲ್ಕು ಕಾದಂಬರಿಗಳಲ್ಲಿ ಭಾರತೀಯ ವ್ಯಕ್ತಿಯೊಬ್ಬ ಭಾರತೀಯ ಸಮಾಜವನ್ನು ನೋಡುವ ದೃಷ್ಟಿಕೋನವಿದೆ. ಆದರೆ 'ಬಯಲು-ಬಸಿರು' ಕಾದಂಬರಿಯಲ್ಲಿ ಪಾಶ್ಚಿಮಾತ್ಯನೊಬ್ಬನ' ದೃಷ್ಟಿಕೋನವು ಭಾರತೀಯ ಸಮಾಜವನ್ನು ನೋಡುವ ಬಗೆಯಿದೆ.

'ಬಯಲು-ಬಸಿರು' ಕಾದಂಬರಿಯ ಕಥಾನಾಯಕ ನಾರ್ಮ್ಯಾನ್ ಒಬ್ಬ ಅಮೇರಿಕನ್ ಪ್ರಜೆ. ನಗರ ಜೀವನದ ರಿಕ್ತತೆ, ಒಂಟಿತನ, ಅನಾಥಪ್ರಜ್ಞೆಯಿಂದ ಬೇಸತ್ತು ಹೊಸ ಮೌಲ್ಯಗಳ ಅನ್ವೇಷಣೆಗಾಗಿ ಭಾರತಕ್ಕೆ ಬರುತ್ತಾನೆ. ಆಧುನಿಕ ವಿಚಾರವಾದಗಳು, ವ್ಯಕ್ತಿವಿಶಿಷ್ಟತಾಮೌಲ್ಯಗಳು ಪಾಶ್ಚಿಮಾತ್ಯರಲ್ಲಿ ಯಾವ ಪರಿಣಾಮವನ್ನುಂಟು ಮಾಡಿವೆ ಎಂಬುದನ್ನು ಕಾದಂಬರಿಯು ಧ್ವನಿಸುತ್ತದೆ. ಪಾಶ್ಚಿಮಾತ್ಯ ಸಂಸ್ಕೃತಿ ಭಾರತೀಯರನ್ನು ಆಕರ್ಷಿಸಿ, ವ್ಯಕ್ತಿವಿಶಿಷ್ಟತೆಯನ್ನು ಭಿತ್ತಿ, ಇಲ್ಲಿನ ನಗರಜೀವನದಲ್ಲಿ ಹಲವಾರು ಸಂಘರ್ಷಗಳನ್ನು ಉಂಟು ಮಾಡಿವೆ. ಕೌಟುಂಬಿಕ ವಿಘಟನೆ, ಏಕಾಂಗಿನ, ಬದುಕಿನ ರಿಕ್ತತೆಯು ಆಧುನಿಕ ವಿಚಾರವಾದದ ಪರಿಣಾಮ ಎಂದು ನಾರ್ಮ್ಯನ್ ಅವುಗಳೆಡೆಗೆ ವಿಮುಖನಾಗಿ ದೇಶವನ್ನು ತೊರೆಯುತ್ತಾನೆ. ಅಧ್ಯಾತ್ಮಿಕತೆಯಂತಹ ಭಾರತೀಯ ಪಾರಂಪರಿಕ ಮೌಲ್ಯಗಳು ಅವನಿಗೆ ಹೊಸ ಮೌಲ್ಯಗಳಾಗಿ ಕಂಡುಬರುತ್ತವೆ. ಅವನನ್ನು ಭಾರತದೆಡೆಗೆ ಆಕರ್ಷಿಸುತ್ತವೆ. ಭಾರತದಲ್ಲಿ ಹೊಸ ಮೌಲ್ಯಗಳ ಶೋಧನೆಯಲ್ಲಿಯೂ ಆತನು ತೊಡಗುತ್ತಾನೆ.

ಭಾರತೀಯರು ಪಾಶ್ಚಿಮಾತ್ಯರ ವಿಚಾರಧಾರೆಗಳ ಪ್ರಭಾವಕ್ಕೆ ಒಳಗಾಗಿ ಅಲ್ಲಿನ ಸಂಸ್ಕೃತಿಯೆಡೆಗೆ ಹೊರಳುವ ಹಂತದಲ್ಲಿಯೇ, ಪಾಶ್ಚಿಮಾತ್ಯರು ಭಾರತೀಯ ಸಂಸ್ಕೃತಿಯೆಡೆಗೆ ಆಕರ್ಷಿತರಾಗುತ್ತಿದ್ದಾರೆ ಎಂಬ ಸಂದೇಶವನ್ನು ಕಾದಂಬರಿಯು ತಿಳಿಸುತ್ತದೆ.

ಕುಸುಮಾಕರರ ಕಾದಂಬರಿಗಳ ಕೇಂದ್ರಬಿಂದು ಮಾನಸಿಕ ಅಸ್ವಸ್ಥರಾದ ವ್ಯಕ್ತಿಗಳು. ಜೀವನದಲ್ಲಿ ರಿಕ್ತತೆಯನ್ನು ಅನುಭವಿಸಿದವರು. ಇಂತಹ ಪಾತ್ರಗಳಿಗೆ ತಮ್ಮ ಕಾದಂಬರಿಗಳಲ್ಲಿ ಆದ್ಯತೆಯನ್ನು ನೀಡಿರುವರಾದರೂ, ಜೊತೆಗೆ ಇದಕ್ಕೆ ವಿರುದ್ಧವಾದ ವ್ಯಕ್ತಿತ್ವ ಹೊಂದಿರುವ ಪಾತ್ರಗಳನ್ನು ತಮ್ಮ ಎಲ್ಲಾ ಕಾದಂಬರಿಗಳಲ್ಲಿಯೂ ತಂದಿದ್ದಾರೆ.

'ನಾಲ್ಕನೆಯ ಆಯಾಮ'ದಲ್ಲಿ ಕಥಾನಾಯಕನಿಗೆ ವಿರುದ್ಧವಾಗಿ ಆತನ ಗೆಳೆಯ, 'ನಿರಂದ್ರಿಯ'ದಲ್ಲಿ ರೊಳ್ಳಿಗೆ ಮತ್ತು ವೃಂದಾಳಿಗೆ ವಿರುದ್ಧವಾಗಿ ವಿಜಯ ಮತ್ತು ನಂದಾಗ ಜೋಡಿ. 'ಪರಿಘ'ದಲ್ಲಿ ಅಜೇಯನಿಗೆ ಅರವಿಂದ, 'ಬಯಲು-ಬಸಿರು' ಕಾದಂಬರಿಯಲ್ಲಿ ಅನಿಕೇತನಂದನಿಗೆ ಅವನ ಶಿಷ್ಯ ವಿನಯಾನಂದನ ಜೋಡಿಯಿದೆ.

ಮಾನಸಿಕ ದುರ್ಬಲರೂ ಆದರೆ ವಿಶಿಷ್ಟ ನಾಯಕರ ಚಿತ್ರಣದಲ್ಲಿ ಕಾದಂಬರಿಗಳು ಪ್ರತಿ ಪಾತ್ರಗಳನ್ನು ತರುತ್ತವೆ. ಕಾದಂಬರಿಗಳಲ್ಲಿ ನಾಯಕ ಪಾತ್ರಗಳೆಲ್ಲವೂ ಸೂಕ್ಷ್ಮ ಮತಿಗಳು, ಸಂವೇದನಾಶೀಲರು, ಮಾನಸಿಕ ದ್ವಂದ್ವವುಳ್ಳವರೂ ಆಗಿದ್ದಾರೆ. ಆದರೆ ಪ್ರತಿಪಾತ್ರಗಳು ಬದುಕಿನಲ್ಲಿ ಯಾವುದೇ ಬಗೆಯ ದ್ವಂದ್ವಗಳಿಲ್ಲದೆ ಮಾನಸಿಕ ಧೃಢತೆಯನ್ನು ಹೊಂದಿದ್ದಾರೆ. ಕಾದಂಬರಿಗಳು ಪ್ರತಿನಾಯಕರ ನೆರಳಿನಲ್ಲಿ ಕಥಾನಾಯಕರ ವ್ಯಕ್ತಿ ವಿಶಿಷ್ಟತೆಯನ್ನು ಸ್ಪಷ್ಟವಾಗಿ ಚಿತ್ರಿಸಲು, ಅವರ ವಿಶಿಷ್ಟತೆಯನ್ನು ವಿಶ್ಲೇಷಿಸಲು ಈ ತಂತ್ರವನ್ನು ಬಳಸಿಕೊಂಡಿವೆ. ಕಥಾನಾಯಕರ ವ್ಯಕ್ತಿವಿಶಿಷ್ಟತೆಯನ್ನು ಚಿತ್ರಿಸಲು ಅಂಗಗಳಾಗಿ ಪ್ರತಿಪಾತ್ರಗಳು ಕಾದಂಬರಿಯಲ್ಲಿ ಕಾಣಿಸಿಕೊಂಡಿವೆ. ಎಲ್ಲಾ ಕಡೆಗಳಲ್ಲಿಯೂ ಈ ತಂತ್ರ ಯಶಸ್ವಿಯಾಗಿದೆ ಎಂದು ಹೇಳಲು ಬರುವುದಿಲ್ಲ. ಬಹುತೇಕವಾಗಿ 'ನಾಲ್ಕನೆಯ ಆಯಾಮ' 'ನಿರಿಂದ್ರಿಯ' 'ಬಯಲು-ಬಸಿರು' ಕಾದಂಬರಿಗಳಲ್ಲಿ ಈ ಬಗೆಯ ತಂತ್ರವು ಸಾಫಲ್ಯವನ್ನು ಪಡೆದಿದೆ.

ಆದರೆ 'ಪರಿಘ' ಕಾದಂಬರಿಯಲ್ಲಿ ಈ ತಂತ್ರವು ಯಶಸ್ವಿಯಾಗಿಲ್ಲ. ಇಲ್ಲಿನ ಅಜೇಯ ಮತ್ತು ಅರವಿಂದರು ಬಾಲ್ಯದಿಂದಲೂ ಜೊತೆಯಲ್ಲಿ ಬೆಳೆದವರು. ನಂತರ ಸಮಾಜದಲ್ಲಿ ಉತ್ತಮ ಉದ್ಯೋಗಗಳನ್ನು ಪಡೆದು, ಪ್ರತಿಷ್ಠಿತ ವ್ಯಕ್ತಿಗಳೆನಿಸಿಕೊಂಡವರು. ಇಲ್ಲಿಯ ಅಜೇಯ ಮಾನಸಿಕ ದ್ವಂದ್ವಗಳಿಗೆ ಒಳಗಾದವನು. ಅವನ ಮನಸ್ಸು ಯಾವಾಗಲೂ ದೌರ್ಬಲ್ಯಗಳ ಗೂಡು. ಇದಕ್ಕೆ ಅರವಿಂದನ ವ್ಯಕ್ತಿತ್ವ ತದ್ವಿರುದ್ಧವಾದುದು. ಅವನು ಸದೃಢ ಮನಸ್ಸಿನವನು.' ಅಜೇಯನ ಆಲೋಚನೆ ಮತ್ತು ನಡವಳಿಕೆಯಲ್ಲಿ ಅಂತರವಿದ್ದರೆ, ಅರವಿಂದನ ಆಲೋಚನೆ ಮತ್ತು ನಡವಳಿಕೆಯಲ್ಲಿ ಏಕರೂಪತೆಯಿದೆ. ಅಜೇಯ ಸಮಾಜದಲ್ಲಿ ಶ್ರೇಷ್ಠ ಸಾಹಿತಿಯಾಗಿ ಬೆಳೆದು ಹಲವು ಪ್ರಶಸ್ತಿ ಪುರಸ್ಕಾರಗಳನ್ನು ಪಡೆದರೂ, ಅವನ ಅಂತರಾತ್ಮ ಅದನ್ನು ಒಪ್ಪದೆ ಗೊಂದಲಕ್ಕೀಡಾಗುತ್ತಾನೆ. ಇದರ ಬಗ್ಗೆ ಸಿ.ಎನ್.ರಾಮಚಂದ್ರನ್‌ರವರು,

"ಅಜೇಯ ಮತ್ತು ಅರವಿಂದ ಪೂರಾ ಕಪ್ಪು-ಬಿಳುಪು ಪಾತ್ರಗಳಾದ್ದರಿಂದ ಮತ್ತು ಅಜೇಯನ ವಿಡಂಬನಾ ಕೃತಿ ಮುಂದುವರೆದಂತೆ ಪುನರುಕ್ತಿಯಾಗಿ ನೀರಸವಾಗುವುದರಿಂದ, ಈ ಕೃತಿ ಓದುಗರನ್ನು ಅಷ್ಟಾಗಿ ತಟ್ಟುವುದಿಲ್ಲ"[೪]

ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ನಿಜ, ಕಾದಂಬರಿಯು ಈ ರೀತಿಯ ಸಂಪೂರ್ಣವಾಗಿ ಋಣಾತ್ಮಕ ಮತ್ತು ಧನಾತ್ಮಕ ಪಾತ್ರಗಳನ್ನು ಸೃಷ್ಟಿಕೊಂಡಿದೆ. ಇದು ಕಾದಂಬರಿಯ ಓದುಗರಿಗೆ ಒಂದು ಅತಿರೇಕವಾಗಿ ಕಾಣುವುದರಲ್ಲಿ ಯಾವುದೇ ಸಂದೇಹವಿಲ್ಲ.

ಕುಸುಮಾಕರರ ಕಾದಂಬರಿಗಳು ವ್ಯಕ್ತಿವಿಶಿಷ್ಟತೆಯನ್ನು ಪ್ರತಿಪಾದಿಸಲು ಅಥವಾ ಆಧುನಿಕ ಮನಃಶಾಸ್ತ್ರದ ಹಿನ್ನೆಲೆಯನ್ನು ಬಳಸಿಕೊಂಡಿವೆ. ಸಿಗ್ಮಂಡ್ ಫ್ರಾಯ್ಡ್, ಆ್ಯಡ್ಲರ್, ಸಿ.ಜೆ.ಯೂಂಗ್ ಮುಂತಾದ ಆಧುನಿಕ ಮನಃಶಾಸ್ತ್ರಜ್ಞರ ಮನಃಶಾಸ್ತ್ರೀಯ ಸಿದ್ಧಾಂತಗಳು ಇವರ ಕಾದಂಬರಿಗಳ ಮೇಲೆ ಪ್ರಭಾವ ಬೀರಿವೆ. ಮಾನಸಿಕ ಸಂಕ್ಷೋಭೆಗೆ ಒಳಗಾಗಿರುವ ಪ್ರಮುಖ ಪಾತ್ರಗಳು ಇವರ ಕಾದಂಬರಿಗಳಲ್ಲಿ ಭ್ರಮೆಗಳನ್ನು ಸೃಷ್ಟಿಸಿಕೊಳ್ಳುತ್ತವೆ. 'ನಾಲ್ಕನೆಯ ಆಯಾಮ'ದ ಮನೋಜ್ ಕುಮಾರ್ , 'ಮುಗಿಯದ ಕತೆ'ಯ ದೇಶಪಾಂಡೆ, 'ನಿರಿಂದ್ರಿಯ'ದ ರೊಳ್ಳಿ, 'ಪರಿಘ'ದ ಅಜೇಯ, 'ಬಯಲು-ಬಸಿರು' ಕಾದಂಬರಿಯ ನಾರ್ಮ್ಯಾನ್ ಎಲ್ಲರೂ ಬದುಕಿನಲ್ಲಿ ನೊಂದವರು. ನಿಜಜೀವನದಲ್ಲಿ ಇವರೆಲ್ಲರೂ ಅತೃಪ್ತರು. ಇಂದಿನ ಆಧುನಿಕ ಸ್ಪರ್ಧಾತ್ಮಕ ಯುಗದಲ್ಲಿ ಅವರ ಮನಸ್ಸಿನ ಕಾಮನೆಗಳು ಈಡೇರಲಾರವು. ಅಂತಹ ಸಂದರ್ಭದಲ್ಲಿ ತಮ್ಮ ಸಾರ್ಥಕ ಬಾಳಿನ ಅರ್ಥಶೋಧನೆಗಾಗಿ ವ್ಯಕ್ತಿಯೊಬ್ಬ ಪ್ರಜ್ಞಾಪೂರ್ವಕವಾಗಿ ಕಟ್ಟಿಕೊಳ್ಳುವ ಹಗಲುಗನಸನ್ನು ಭ್ರಮೆ ಎಂದು ಕರೆಯುತ್ತೇವೆ. ಈ ಮೇಲ್ಕಂಡ ಎಲ್ಲಾ ಪಾತ್ರಗಳು ಭ್ರಮೆಗಳಲ್ಲಿ ಕ್ಷಣಿಕ ತೃಪ್ತಿ ಪಡೆಯುತ್ತವೆ. ಭ್ರಮೆಯಿಂದ ವಾಸ್ತವಕ್ಕೆ ಹಿಂದಿರುಗಿದ ಕೂಡಲೇ ಅವರ ಮನಸ್ಸಿನ ಸ್ಥಿತಿ ಮೊದಲಿದ್ದ ಹಾಗೆಯೇ ಆಗುತ್ತದೆ.

ಇವರ ಕಾದಂಬರಿಗಳಲ್ಲಿ ಪಾತ್ರಗಳು ಸ್ವಪ್ನಗಳನ್ನು ಕಾಣುತ್ತವೆ. ಭ್ರಮೆಗಳು ಪ್ರಜ್ಞಾಪೂರ್ವಕವಾಗಿ ಮನಸ್ಸಿನ ಜಾಗೃತ ಭಾಗದಲ್ಲಿ ನಡೆಯುವ ಕ್ರಿಯೆಗಳಾದರೆ, ಸ್ವಪ್ನಗಳು ನಿದ್ರಾವಸ್ಥೆಯಲ್ಲಿ ಮನಸ್ಸಿನ ಅಜಾಗೃತಭಾಗದಲ್ಲಿ ನಡೆಯುವ ಮಾನಸಿಕ ಕ್ರಿಯೆಗಳು. ಸ್ವಪ್ನಗಳು ಕಾದಂಬರಿಯಲ್ಲಿ ಪಾತ್ರಗಳಿಗೆ ವ್ಯಕ್ತಿವಿಶಿಷ್ಟತೆಯು ವಾಸ್ತವದಲ್ಲಿ ಈಡೇರದಾಗ ಉಂಟಾಗುತ್ತವೆ. ಇವರ ಈಡೇರದ, ತಡೆಹಿಡಿಯಲ್ಪಟ್ಟ ಕಾಮನೆಗಳು ಮೆದುಳಿನ ಅಜಾಗೃತ ಭಾಗಕ್ಕೆ ತಳ್ಳಲ್ಪಡುತ್ತವೆ. ಕಾದಂಬರಿಗಳಲ್ಲಿನ ವ್ಯಕ್ತಿಗಳು ನಿದ್ರಾವಸ್ಥೆಯಲ್ಲಿದ್ದಾಗ ಅಜಾಗೃತ ಭಾಗದಿಂದ ಜಾಗೃತ ಭಾಗಕ್ಕೆ ಅವು ಹರಿದು ಕನಸ್ಸಿನ ರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ಆಧುನಿಕ ಮನಃಶಾಸ್ತ್ರದಲ್ಲಿ ಸ್ವಪ್ನಗಳು ಪ್ರಮುಖವಾಗಿರುವುದರಿಂದ ಕುಸುಮಾಕರರ ಕಾದಂಬರಿಗಳಲ್ಲಿ ಇದು ಆದ್ಯತೆಯನ್ನು ಪಡೆದುಕೊಂಡಿದೆ. ಇದಕ್ಕೆ ನಿದರ್ಶನವಾಗಿ 'ನಿರಿಂದ್ರಿಯ' ಕಾದಂಬರಿಯಲ್ಲಿ ರೊಳ್ಳಿಯು ಕಾಣುವ ಸ್ವಪ್ನವಿದು.

"ಒಂದು ರಾತ್ರಿ ಒಂದು ಕಸು. ಎಷ್ಟು ಸಲ ಈ ಕನಸನ್ನು ಕಂಡಿದ್ದಾನೆ. ಮನೆಗೆ ಗೋಡೆಗಳೇ ಇಲ್ಲ. ಕ್ಯಾಲೆಂಡರುಗಳೇ ಗೋಡೆಗಳು. ಕ್ಯಾಲೆಂಡರದ ಮೇಲೆ ಇರುವ ಚಿತ್ರಗಳು ಅವನ

ಮನಸ್ಸನ್ನು ಅರಳಿಸಿಲ್ಲ. ಅವುಗಳ ಬಣ್ಣ ಕಂಡಿಲ್ಲ. ಕ್ಯಾಲೆಂಡರುಗಳ ಮೇಲೆ ಅವು ಎಲ್ಲವೂ ನಾಲ್ಕು ಎಂದು ಮಾತ್ರ ತೋರಿಸುತ್ತವೆ. ವಾರ ಯಾವುದಿದೆಯೋ ಅದು ಸ್ಪಷ್ಟವಾಗಿ ಗೊತ್ತಾಗುತ್ತಿಲ್ಲ; ಯಾಕೋ ಏನೋ ಎಚ್ಚರಾಗುತ್ತದೆ. ಇದೇನು ಅಂತಹ ಭಯಾನಕ ಸ್ವಪ್ನವಲ್ಲ ಆದರೂ ಎದೆಬಡಿತ ಹೆಚ್ಚುತ್ತದೆ. ಮೈಯಿಂದ ಬೆವರು ಇಳಿಯುತ್ತದೆ. ಏನೂ ಅರ್ಥವಾಗದೆ ಬೆರಗುಗಣ್ಣುಗಳಿಂದ ನಾಲ್ಕು ದಿಕ್ಕಿಗೆ ಗೋಡೆಗಳನ್ನು ನೋಡುತ್ತಾನೆ. ಆ ಕತ್ತಲಲ್ಲಿ ಏನೂ ಕಾಣದು. ಮಲ್ಲಗಿದ್ದಲ್ಲಿಂದಲೇ ಎರಡು ಕೈಗಳನ್ನು ಚಾಚಿ ಗೋಡೆಗಳನ್ನು ಮುಟ್ಟಿ ಮುಟ್ಟಿ ನೋಡುತ್ತಾನೆ ಗೋಡೆ ಇದೆ. ಮನಸ್ಸು ವಿಶಾದದ ಆಳಕ್ಕೆ ಇಳಿಯುತ್ತದೆ. ನಿರ್ವಿಣ್ಣತೆ ಅವನನ್ನು ಹಿಂಡಿ ಹಿಪ್ಪೆ ಮಾಡುತ್ತದೆ. ಯಾಕೆ ಈ ಕನಸು ನನ್ನನ್ನು ಕಾಡುತ್ತವೆ? ಇದಕ್ಕೆ ಯಾರು ಉತ್ತರ ಹೇಳಬೇಕು."[8]

-ಇಲ್ಲಿ ರೊಳ್ಳಿಯ ಮಾನಸಿಕ ಸಂಕ್ಷೋಭೆಯು ಅವನು ಕಾಣುವ ಕನಸ್ಸಿನಲ್ಲಿದೆ. ಆಧುನಿಕ ವಿಚಾರವಾದದ ಪ್ರಭಾವದಿಂದ ವ್ಯಕ್ತಿ ವಿಶಿಷ್ಟತಾ ಮೌಲ್ಯ ಪ್ರಜ್ಞೆ ಅವನಲ್ಲಿ ಜಾಗೃತಗೊಂಡಿದೆ. ಅದನ್ನು ತನ್ನ ಬದುಕಿನಲ್ಲಿ ಸ್ಥಾಪಿಸುವಲ್ಲಿ ಸೋತಿದ್ದಾನೆ. ಅದರ ಪರಿಣಾಮವಾಗಿ ಒಂಟಿತನ, ಅನಾಥಪ್ರಜ್ಞೆಗಳು ರೊಳ್ಳಿಯನ್ನು ಕಾಡುತ್ತಿವೆ. ಇದು ಅವನ ಕನಸ್ಸಿನಲ್ಲಿ ವ್ಯಕ್ತಗೊಂಡಿದೆ.

ರೊಳ್ಳಿಗೆ ನಗರ ಜೀವನದಲ್ಲಿ ನೆಮ್ಮದಿಯಿಲ್ಲ. ಪ್ರತಿಯೊಂದು ದಿನಗಳು ಅವನ ಪಾಲಿಗೆ ಒಂದೇ. ರೊಳ್ಳಿಯ ಕನಸ್ಸಿನ ಕ್ಯಾಲೆಂಡರಿನ ಒಂದೇ ಅಂಕಿಯು ಇದನ್ನು ಸೂಚಿಸುತ್ತದೆ. ಬದುಕಿನಲ್ಲಿ ವೈವಿಧ್ಯತೆಯನ್ನು ಸೌಂದರ್ಯವನ್ನು ಕಳೆದುಕೊಂಡಿದ್ದಾನೆ. ನಗರಜೀವನದ ಯಾಂತ್ರಿಕ ಬದುಕಿನಲ್ಲಿ ರೊಳ್ಳಿಯು ಬೇಸತ್ತಿದ್ದಾನೆ. ತನ್ನ ವ್ಯಕ್ತಿವಿಶಿಷ್ಟತೆಯನ್ನು ಸಾಮುದಾಯಿಕ ಜೀವನದಲ್ಲಿ ತೋರ್ಪಡಿಸಲಾಗದೆ ಸೋತು ನರಳುತ್ತಿದ್ದಾನೆ. ಬದುಕೇ ಒಂದು ದುರ್ಭರವಾಗಿದೆ ಅವನ ಪಾಲಿಗೆ. ಜೀವನದಲ್ಲಿ ವಿಷಾದ ಮಡುಗಟ್ಟಿ ನಿಂತಿದೆ.

ಕಾದಂಬರಿಯು ಈ ಬಗೆಯ ಸ್ವಪ್ನತಂತ್ರಗಳ ಮೂಲಕ ವ್ಯಕ್ತಿವಿಶಿಷ್ಟತೆಯು ಹೆಚ್ಚು ಪರಿಣಾಮಕಾರಿಯಾಗಿ ಬರುವಂತೆ ಮಾಡಿದೆ. ಕಾದಂಬರಿಗಳಲ್ಲಿನ ವ್ಯಕ್ತಿವಿಶಿಷ್ಟತೆಯ ಸ್ವರೂಪವನ್ನು ನಿಖರವಾಗಿ ಸ್ವಪ್ನಗಳು ಓದುಗರಿಗೆ ಮನದಟ್ಟು ಮಾಡಿಕೊಡುತ್ತವೆ.

ಕುಸುಮಾಕರರ ಕಾದಂಬರಿಗಳಲ್ಲಿ ಚಿತ್ರಿತರಾಗಿರುವ ಕೇಂದ್ರ ಪಾತ್ರಗಳಲ್ಲದೆ ಹಲವು ವಿಭಿನ್ನ ವ್ಯಕ್ತಿತ್ವದ, ನಡವಳಿಕೆ ಹೊಂದಿರುವ ಪಾತ್ರಗಳು ಬಂದಿವೆ.

'ಮುಗಿಯದ ಕತೆ'ಯಲ್ಲಿನ ಶಿಸ್ತಿನ ಮುಖ್ಯೋಪಾಧ್ಯಾಯರು, ವ್ಯಾವಹಾರಿಕ ಪ್ರವೃತ್ತಿಯ ಜಂಗಮಸೆಟ್ಟಿ, ಅಹಂಕೇಂದ್ರಿತ ವ್ಯಕ್ತಿತ್ವದ ಮಾನಸಿಕತಜ್ಞ ಉಗರಗೋಳ್, ಕಾಲೇಜಿನಲ್ಲಿ ಹುಡುಗಿಯರಿಗೆ ಮಾತ್ರ ಡ್ಯಾನ್ಸ್ ಮಾಸ್ಟರ್ ಆಗಿರಬೇಕೆಂಬ ಹಂಬಲದ ರ‍್ಯಾಕೀ, ತನ್ನ ಗಂಡನ ವ್ಯಕ್ತಿತ್ವದ ಅಭಿವೃದ್ಧಿಗೆ ದೈವಕ್ಕೆ ಶರಣುಹೋಗುವ ದೇಶಪಾಂಡೆಯ ಹೆಂಡತಿ-ಸರಸ್ವತಿ, ಮಗನನ್ನು ಯಾವಾಗಲೂ ನಿಯಂತ್ರಣದಲ್ಲಿಟ್ಟುಕೊಳ್ಳಬೇಕೆಂದು ಬಯಸುವ

ಮಾನೋಜ್‌ಕುಮಾರನ ತಂದೆ, ತಂದೆ-ಮಗ ಇವರಲ್ಲಿ ಮಧ್ಯಸ್ಥಿಕೆ ವಹಿಸುವ ಅವನ ತಾಯಿ, ಮುಕ್ತ ಸ್ವಭಾವದ ವೃಂದಾ, ಹಣಕ್ಕಾಗಿ ತಂದೆಯೊಡನೆ ಜಗಳವಾಡುವ ರೊಳ್ಳಿಯ ಮಕ್ಕಳು, ಮನೆತನದ ಪ್ರತಿಷ್ಠೆಗಾಗಿ ಯಾವಾಗಲೂ ಜಗಳವಾಡುವ ರೊಳ್ಳಿಯ ತಂದೆ ಮತ್ತು ದೇಸಾಯಿ, ತಮಗೆ ಹೆಚ್ಚಿಗೆ ಹಣ ಸಿಗಲಿ ಎಂದು ಅತ್ತೆಯನ್ನು ಪುಸಲಾಯಿಸುವ ಮಾಲಿನಿ, ಅನೋನ್ಯವಾಗಿರುವ ದಂಪತಿಗಳಾದ ನಂದಾ ಮತ್ತು ವಿಜಯ, ಸ್ವಾತಂತ್ರ್ಯ ಹೋರಾಟಗಾರ ಗಿರಿಧರ, ಗಂಡನ ನಿರ್ಗಮನದಲ್ಲಿಯೂ ಏಕಾಂಗಿಯಾಗಿ ಉಳಿದು ಮಗನನ್ನು ಸಾಕುವ ಶಕುಂತಲೆ, ಪರೋಪಕಾರಿ ಕಲ್ಲಣ್ಣ, ಗಂಡನ ಮನಸ್ಥಿತಿಯನ್ನು ತಿಳಿಯದೆ ತೊಳಲಾಡುವ ಪ್ರತಿಮಾ, ದಾಂಪತ್ಯದಲ್ಲಿ ವಿರಸಗೊಂಡು ಅವರವರ ದಾರಿ ಹಿಡಿದ ಕಸಿನ್ಸ್ ಮತ್ತು ಜೆಸ್ಸಿ, ಗುರು ವಿನಯಾನಂದನಿಗೆ ವೈಚಾರಿಕ ಮುಖಾ-ಮುಖಿಯಾಗುವ ವಿನಯಾನಂದ. ಹೀಗೆ ಇವರ ಕಾದಂಬರಿಗಳ ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ವೈಶಿಷ್ಟ್ಯವನ್ನು ಕಾಣಬಹುದು.

ಆದರೆ ಕುಸುಮಾಕರರ ಕಾದಂಬರಿಗಳ ನಿಲುವು ವ್ಯಕ್ತಿಕೇಂದ್ರಿತ ಮೌಲ್ಯವಾಗಿರುವುದರಿಂದ ಕಾದಂಬರಿಗಳ ಉಳಿದ ಪಾತ್ರಗಳು ಕಥಾನಾಯಕರಿಗೆ ಪೂರಕವಾಗಿ ಬರುತ್ತವೆ. ಸಮಾಜ ಕೇಂದ್ರಿತ ಕಾದಂಬರಿಗಳಲ್ಲಿ ಪ್ರತಿಯೊಂದು ಪಾತ್ರಗಳು ಮಹತ್ವ ಪಡೆಯುತ್ತವೆ. ಆದರೆ ಇವರ ವಿಚಾರ ಪ್ರಧಾನ ಕಾದಂಬರಿಗಳಲ್ಲಿ ನಾಯಕ ಪಾತ್ರಗಳನ್ನು ಬಿಟ್ಟು ಉಳಿದವು ಅಗಣ್ಯವಾಗಿ ಬಿಡುತ್ತವೆ. ಜೊತೆಗೆ ನಾಯಕನ ವ್ಯಕ್ತಿವಿಶಿಷ್ಟತೆಯನ್ನು ಚಿತ್ರಿಸುವಲ್ಲಿ ಪೂರಕ ಸಾಮಗ್ರಿಗಳಂತೆ ಕೆಲವು ಸನ್ನಿವೇಶಗಳಲ್ಲಿ ಬಂದು ಉಳಿದಂತೆ ಮರೆಯಾಗುತ್ತವೆ.

> "ನವ್ಯ ಕೃತಿಯಲ್ಲಿನ ಪಾತ್ರಗಳು, ಸುಸಂಗತವಾದ ಸುಸಂಬದ್ಧವಾದ ಸೂತ್ರೀಕರಿಸಿಬಹುದಾದ ಅಸ್ತಿತ್ವವುಳ್ಳವು ಎಂಬ ಸಾಮಾನ್ಯ ಕಲ್ಪನೆಗೆ ಬದಲಾಗಿ, ಅವು ಗ್ರಹಿಕೆಯ ಮಾಧ್ಯಮ, ಅರ್ಥವಾಗದ ಒಗಟು Psychic battle field ಎನ್ನುವಂತೆ ಚಿತ್ರಣಗೊಳ್ಳುತ್ತವೆ. ವ್ಯಕ್ತಿ ಮತ್ತು ಸಮಷ್ಟಿಯ ಸಂಬಂಧ ಇಲ್ಲಿ ವಿಷಮವಾದದ್ದು; ವ್ಯಕ್ತಿಯಲ್ಲಿ ಅಂತಸ್ಥವಾದ ಶಕ್ತಿಗೂ ಹೊರಗಿನ ವಸ್ತುನಿಷ್ಠ ಸಮಷ್ಟಿಗೂ ಘರ್ಷಣೆ; ಸಮಷ್ಟಿ, ವ್ಯಕ್ತಿಯ ಅಂತಃಸತ್ವದ ವಿಕಾಸಕ್ಕೆ ಮಾರಕವಾದದ್ದು; ಇಲ್ಲವೆ ಅದು ತಟಸ್ಥವಾದದ್ದು. ಸಾಂಪ್ರದಾಯಿಕ ನಾಯಕ ಪಾತ್ರದ, ಶಕ್ತಿ ಸಾಮರ್ಥ್ಯ ಮತ್ತು ಸಾಧಿಸಬೇಕಾದ ಮೌಲ್ಯಗಳು ಒಂದಾಗಿ, ಅವನು ಒಂದು ಉದ್ದೇಶಕ್ಕಾಗಿ ಕ್ರಿಯಾಶೀಲ ನಾಗುವುದು, ಸಾಧ್ಯ. ಆದರೆ ನವ್ಯ ಕೃತಿಯಲ್ಲಿ, ಮೌಲ್ಯ ಮತ್ತು ಶಕ್ತಿಗಳು ಮೂಲದಲ್ಲಿಯೇ ಕೀಲುತಪ್ಪಿ ಭಿನ್ನವಾಗಿರುವುದರಿಂದ ಅಲ್ಲಿನ ನಾಯಕನ ಅಥವಾ ನಾಯಕನ ಗ್ರಹಿಕೆಗೂ ಕ್ರಿಯೆಗೂ ಮಧ್ಯೆ ಅನಿಶ್ಚಯದ ನೆರಳು ಬಿದ್ದು ಅವನು ಕ್ರಿಯಾಶೀಲನಾಗಲು ಅನಿವಾರ್ಯವಾಗಿ ಸಾಧ್ಯವಾಗುವುದಿಲ್ಲ".[೬]

ಒಟ್ಟು ನವ್ಯ ಚಳುವಳಿಯ ಬಗ್ಗೆ ನೀಡಿರುವ ಎಚ್.ಎಂ.ಚನ್ನಯ್ಯನವರ ಈ ಮೇಲ್ಕಂಡ ಅಭಿಪ್ರಾಯವನ್ನು ಕುಸುಮಾಕರರ ಕಾದಂಬರಿಗಳಿಗೂ ಅನ್ವಯ ಮಾಡಬಹುದು.

## ವ್ಯಕ್ತಿವಿಶಿಷ್ಟತೆಗೆ ಕಾದಂಬರಿಗಳಲ್ಲಿ ಬಳಕೆಯಾಗಿರುವ ಧಾಟಿ

ವ್ಯಕ್ತಿವಿಶಿಷ್ಟತೆಯನ್ನು ತರುವಲ್ಲಿ ಕಾದಂಬರಿಗಳು ವಿಶಿಷ್ಟ ಧಾಟಿಯನ್ನು ಅನುಸರಿಸುತ್ತವೆ. ವ್ಯಕ್ತಿ ವಿಶಿಷ್ಟತೆಯನ್ನು ಕೆಲವು ಕಡೆ ಕಾದಂಬರಿಗಳೇ ನಿರೂಪಿಸುತ್ತವೆ. ಪಾತ್ರಗಳ ಸ್ವಭಾವ, ನಡವಳಿಕೆ, ಆಲೋಚನಾ ಕ್ರಮ ಮುಂತಾದವು ನಿರೂಪಣೆಯಲ್ಲಿದೆ. ನಿರೂಪಣೆಯಲ್ಲಿನ ನಿರ್ಭಾವುಕತೆ, ತಾಟಸ್ಥ್ಯನಿಲುವು ಗಮನಸೆಳೆಯುವಂತಹುದು. ಮತ್ತೆ ಕೆಲವು ಕಡೆ ಪಾತ್ರಗಳ ಸಂಭಾಷಣೆ(ನಾಟಕೀಯತೆ)ಯ ಮೂಲಕ ತಿಳಿಯಬಹುದು. ಇದಕ್ಕೆ ಪೂರಕವಾಗಿ ಸಾಕಷ್ಟು ಸಂಖ್ಯೆಯಲ್ಲಿ ಗಾದೆಗಳು ಮತ್ತು ಪ್ರತಿಮೆಗಳು ಬಳಕೆಯಾಗಿವೆ. ಸಂದರ್ಭಕ್ಕೆ-ಸನ್ನಿವೇಶಕ್ಕನುಗುಣವಾಗಿ ನಾಟಕೀಯತೆಯಲ್ಲಿ ವ್ಯತ್ಯಾಸವಿದೆ. ಗ್ರಾಮೀಣ ಪರಿಸರದ ಪಾತ್ರಗಳ ಸಂಭಾಷಣೆಯಲ್ಲಿ ಉತ್ತರ ಕರ್ನಾಟಕದ ಪ್ರಾಂತೀಯ ಭಾಷೆ ಬಳಕೆಯಾಗಿದೆ. ವ್ಯಕ್ತಿವಿಶಿಷ್ಟತೆಯನ್ನು ತರುವಲ್ಲಿ ಸ್ವಪ್ನಗಳು, ಭ್ರಮೆಗಳು, ಮುಖವಾಡ ಮುಂತಾದ ಮನಃಶಾಸ್ತ್ರೀಯ ಪರಿಕಲ್ಪನೆಗಳನ್ನು ಕಾದಂಬರಿಗಳು ಬಳಸಿಕೊಂಡಿವೆ.

ವ್ಯಕ್ತಿವಿಶಿಷ್ಟತೆಯು ಕುಸುಮಾಕರರ ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಿರುವ ಬಗ್ಗೆ ರಹಮತ್ ತರೀಕೆರೆಯವರು-

> "ಅವರ ಕಥನದ ಶಕ್ತಿಯೆಂದರೆ ಜೀವಂತವಾದ ನಾಟಕೀಯವಾದ ಸಂಭಾಷಣೆ, ಮನಸ್ಸಿನೊಳಗೆ ನಡೆಯುವ ತುಮುಲಗಳನ್ನು ಆತ್ಮಸಂವಾದದಂತಹ ಮಾದರಿಯಲ್ಲಿ ಮಂಡಿಸುವ ಹೊಸತನ, ಸುಪ್ತಪ್ರಜ್ಞೆಯೊಳಗೆ ಹೊಕ್ಕು ಕನಸು ಹಳವಂಡಗಳ ಮೂಲಕ ಮನಸ್ಸಿನ ವಿಶ್ಲೇಷಣೆ ಮಾಡುವ ಕುಶಲತೆ. ಅವರ ನಾಯಕರಿಗೆ ಸಾವಿರಾರು ಕನಸುಗಳು ಬೀಳುತ್ತವೆ. ಬೇಂದ್ರೆ ಬಿಟ್ಟರೆ ಇಷ್ಟು ಕನಸುಗಳನ್ನು ಬಳಸಿದ ಲೇಖಕ ಇವರೆ. ಸ್ವಪ್ನತಂತ್ರ ಬಳಸುವ ಹಿಂದೆ ಫ್ರಾಯ್ಡ್‌ನ ಮನೋವಿಜ್ಞಾನ ಇದ್ದಂತೆ ಬೇಂದ್ರೆಯವರೂ ಇರಬಹುದು. ಇಲ್ಲಿ ಕನಸುಗಳು ಕೃತಕವಾಗಿ ಬರುವುದಿಲ್ಲ. ರೂಪಕಗಳಾಗಿ ಬರುತ್ತವೆ. ವ್ಯಕ್ತಿವಿಶಿಷ್ಟತೆ, ಮನೋವಿಶ್ಲೇಷಣೆ, ಅಂತರ್ಮುಖಿನಾಯಕರು, ಅದನ್ನು ವಿವರಿಸಲು ಪ್ರಜ್ಞಾಪ್ರವಾಹತಂತ್ರ, ಇವೆಲ್ಲವೂ ಇಲ್ಲಿ ಒಳಸಂಬಂಧ ಪಡೆದಿವೆ. ವ್ಯಕ್ತಿ ವಿಶಿಷ್ಟವಾದವು ಕನ್ನಡದಲ್ಲಿ ಅರ್ಥಪೂರ್ಣವಾದ ಅಭಿವ್ಯಕ್ತಿಯನ್ನು ಕುಸುಮಾಕರರಲ್ಲಿ ಪಡೆಯುತ್ತದೆ. ಇದಕ್ಕೆ ಕಾರಣ ಅದು ಆಳವಾದ ಪ್ರಾಮಾಣಿಕತೆಯಿಂದ ಕೂಡಿರುವುದು. ಆದರೂ ಹಿಂದಿನ ಕೃತಿಗಳಲ್ಲಿರುವ ಈ ಸಾಧನೆ ಹೊಸ ದಿಸೆಯನ್ನು ಇಲ್ಲಿ ಪಡೆದಂತಿಲ್ಲ."[೨]

ಈ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇಲ್ಲಿ ಕುಸುಮಾಕರರ ವ್ಯಕ್ತಿವಿಶಿಷ್ಟತೆಯ ಅಭಿವ್ಯಕ್ತಿಯ ಕ್ರಮವನ್ನು ಮೆಚ್ಚಿಕೊಂಡಿದ್ದಾರೆ. ಆದರೆ ಇದು ಕಾದಂಬರಿಯಿಂದ ಕಾದಂಬರಿಗೆ ವೈವಿಧ್ಯವನ್ನು ಪಡೆಯದೆ ಎಲ್ಲಾ

ಕೃತಿಗಳಲ್ಲೂ ಏಕರೂಪವಾಗಿದೆ ಎಂಬ ಆಕ್ಷೇಪಣೆ ಇವರದು. ಒಟ್ಟಾರೆ ಕುಸುಮಾಕರರ ಧಾಟಿಯು ವ್ಯಕ್ತಿವಿಶಿಷ್ಟತೆಗೆ ಪೂರಕವಾಗಿ ಕೆಲಸ ಮಾಡಿದೆಯೆಂದು ಹೇಳಬಹುದು.

### ವ್ಯಕ್ತಿವಿಶಿಷ್ಟವಾದದ ಸಂಘರ್ಷಗಳು

ವ್ಯಕ್ತಿವಿಶಿಷ್ಟವಾದವು ಸಮಾಜದಲ್ಲಿನ ವೈವಿಧ್ಯವನ್ನು ಗುರುತಿಸುತ್ತದೆ. ಸಮಾಜದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯು ಭಿನ್ನ ಎಂದು ವ್ಯಕ್ತಿವಿಶಿಷ್ಟವಾದವು ಪರಿಭಾವಿಸುವುದರಿಂದ ಸಮಾಜದಲ್ಲಿರುವ ಎಲ್ಲಾ ಜನರು ಸಮಾನರು ಎಂಬ ತತ್ವಕ್ಕೆ ಧಕ್ಕೆ ಬರುತ್ತದೆ. ವ್ಯಕ್ತಿವಿಶಿಷ್ಟವಾದವು ಸಮತಾವಾದದ ವಿರೋಧಿ. ವ್ಯಕ್ತಿ ವಿಶಿಷ್ಟತೆಯನ್ನು ಒಪ್ಪಿಕೊಳ್ಳುವುದಾದರೆ ಸಾಮಾಜಿಕ ಅಸಮಾನತೆಯನ್ನು ಒಪ್ಪಿಕೊಂಡಂತೆಯೇ ಆಗುತ್ತದೆ. ವ್ಯಕ್ತಿವಿಶಿಷ್ಟತಾ ಮೌಲ್ಯವು ಪ್ರತಿಯೊಬ್ಬರಲ್ಲಿಯೂ ವಿವಿಧ ಬಗೆಯಲ್ಲಿ ವಿಶೇಷ ಸಾಮರ್ಥ್ಯವನ್ನು ಗುರುತಿಸು ವುದರಿಂದ, ಒಬ್ಬರು ಮತ್ತೊಬ್ಬರಿಗಿಂತ ಶ್ರೇಷ್ಠ-ಕನಿಷ್ಠ ಎಂಬ ಧೋರಣೆ ಜನರಲ್ಲಿ ಬೆಳೆಯುವ ಸಾಧ್ಯತೆ ಯಿರುತ್ತದೆ. ವ್ಯಕ್ತಿ-ವಿಶಿಷ್ಟವಾದವು ಪರೋಕ್ಷವಾಗಿ ಸಮಾಜದಲ್ಲಿ ಅಸಮಾನತೆಯನ್ನು ಪ್ರಚೋದಿಸುತ್ತದೆ. ಜೊತೆಗೆ, ವ್ಯಕ್ತಿ ವಿಶಿಷ್ಟತೆಯು ಸಾಮಾಜಿಕವಾಗಿ ವೈವಿಧ್ಯವನ್ನುಂಟು ಮಾಡುತ್ತದೆ. ವ್ಯಕ್ತಿವಿಶಿಷ್ಟವಾದದಿಂದ ಅಸಮಾನತೆ ಮತ್ತು ವೈವಿಧ್ಯದ ನಡುವೆ ಸಂಘರ್ಷವೇರ್ಪಡುತ್ತದೆ.

### ವ್ಯಕ್ತಿವಿಶಿಷ್ಟತೆಗೂ, ತಲೆಮಾರುಸಂಘರ್ಷಕ್ಕೂ ಇರುವ ಅಂತರ್‌ಸಂಬಂಧ

ವ್ಯಕ್ತಿವಿಶಿಷ್ಟತೆಯು ತಲೆಮಾರು ಸಂಘರ್ಷದೊಂದಿಗೆ ಅಂತರ್‌ಸಂಬಂಧ ಪಡೆದಿದೆ. ವ್ಯಕ್ತಿವಿಶಿಷ್ಟತಾ ಮೌಲ್ಯವು ವ್ಯಕ್ತಿಯಲ್ಲಿ ತಾನು ಸಮುದಾಯಕ್ಕಿಂತ ಭಿನ್ನ ಎಂಬ ಮನೋಭಾವವನ್ನು ಬಿತ್ತುತ್ತದೆ. ಇದರಿಂದ ಪ್ರತಿಯೊಬ್ಬ ವ್ಯಕ್ತಿಯು ಮತ್ತೊಬ್ಬನಿಗಿಂತ ವೈಚಾರಿಕವಾಗಿ, ಬೌದ್ಧಿಕವಾಗಿ, ಆಲೋಚನೆ, ಅಭಿರುಚಿ, ಹವ್ಯಾಸ, ಹೊಂದಾಣಿಕೆ ಮುಂತಾದ ಎಲ್ಲ ಅಂಶಗಳಲ್ಲಿಯೂ ವೈಶಿಷ್ಟ್ಯತೆ ಪಡೆಯುತ್ತಾನೆ. ಇದು ಹಲವಾರು ಬಗೆಯ ಸಂಘರ್ಷಗಳಿಗೆ ನಾಂದಿಯಾಗುತ್ತದೆ.ಕುಸುಮಾಕರರ ಕಾದಂಬರಿಗಳಲ್ಲಿ ತಲೆಮಾರು ಸಂಘರ್ಷವು ಬರುವ ಕಡೆಯಲ್ಲೆಲ್ಲಾ ಪ್ರತಿಯೊಬ್ಬರು ಮತ್ತೊಬ್ಬರಿಗಂತ ವಿಶಿಷ್ಟರಾಗಿರುವುದು ಕಂಡುಬರುತ್ತದೆ. ತಲೆಮಾರು ಸಂಘರ್ಷವನ್ನು ಕುರಿತು ಈಗಾಗಲೇ ಹಿಂದಿನ ಅಧ್ಯಾಯನದಲ್ಲಿ ಚರ್ಚಿಸಲಾಗಿದೆ.

ಕುಸುಮಾಕರರ ಕಾದಂಬರಿಗಳಲ್ಲಿ ಹಲವು ಬಗೆಯ ತಲೆಮಾರು ಸಂಘರ್ಷಗಳಿದ್ದರೂ ತಂದೆ-ಮಗ ಇವರ ನಡುವಿನ ಸಂಘರ್ಷ ಪ್ರಧಾನ ಆಶಯವಾಗಿದೆ. 'ನಾಲ್ಕನೆಯ ಆಯಾಮ'ದಲ್ಲಿ ಮನೋಜ್ ಕುಮಾರ್ ಮತ್ತು ಅವನ ತಂದೆ, 'ಮುಗಿಯದ ಕತೆ'ಯಲ್ಲಿ ದೇಶಪಾಂಡೆ ಮತ್ತು ಅವನ ತಂದೆ, 'ನಿರಿಂದ್ರಿಯ'ದಲ್ಲಿ ರೊಳ್ಳಿ ಮತ್ತು ತಂದೆ, 'ಬಯಲು-ಬಸಿರು' ಕಾದಂಬರಿಯಲ್ಲಿ ಅನಿಕೇತಾನಂದ ಮತ್ತು ಅವನ ತಂದೆಯ ನಡುವೆ ತಲೆಮಾರು ಸಂಘರ್ಷವಿದೆ. ಉಳಿದಂತೆ ತಂದೆ-ಮಗಳು, ತಾಯಿ-ಮಗಳು ಮತ್ತು ಅತ್ತೆ-ಸೊಸೆಯರ ನಡುವೆ ತಲೆಮಾರು ಸಂಘರ್ಷವು ಕಾದಂಬರಿಗಳಲ್ಲಿ ಅಲ್ಲಲ್ಲಿ ಬರುತ್ತದೆ.

ಇಲ್ಲಿ ನಮಗೆ ಪ್ರಧಾನವಾಗಿ ಕಾಣುವ ಅಂಶವೆಂದರೆ, ತಲೆಮಾರು ಸಂಘರ್ಷವು ಕುಟುಂಬದೊಳಗಿನ ಹಿರಿಯ ತಲೆಮಾರು ಮತ್ತು ಯುವ ತಲೆಮಾರುಗಳ ನಡುವಿನದು. ಕಾದಂಬರಿಗಳಲ್ಲಿನ ಯುವ ಸಮುದಾಯವು ಆಧುನಿಕತೆ ಮತ್ತು ವಿಚಾರವಾದದ ಸಂಪರ್ಕಪಡೆದಿದೆ. ಇದರಿಂದ ವ್ಯಕ್ತಿವಿಶಿಷ್ಟತಾಮೌಲ್ಯಗಳು ಅವರ ಪ್ರಜ್ಞೆಯಲ್ಲಿ ಸೇರಿಹೋಗಿವೆ. ಕುಟುಂಬದಲ್ಲಿ ತಮ್ಮ ವಿಶಿಷ್ಟತೆಯನ್ನು ಸ್ಥಾಪಿಸುವ ಉದ್ದೇಶದಿಂದ ಸಮಾನ ಹಕ್ಕುಗಳಿಗಾಗಿ ಹಿರಿಯ ತಲೆಮಾರಿನ ಅಧಿಕಾರವನ್ನು ಪ್ರಶ್ನಿಸುತ್ತಾರೆ. ಸಮೂಹದಲ್ಲಿ ಭಿನ್ನವಾಗಿ ಗುರುತಿಸಿಕೊಳ್ಳಬೇಕೆಂಬ ಉದ್ದೇಶ ಅವರದು. ಆದರೆ ಕಾದಂಬರಿಗಳಲ್ಲಿನ ಹಿರಿಯ ತಲೆಮಾರುಗಳನ್ನು ಸಮಾಜನಿರ್ಮಿತ ಸಾಂಪ್ರದಾಯಿಕಮೌಲ್ಯಗಳು ಮತ್ತು ವಿವಿಧ ಬಗೆಯ ಸಾಮಾಜಿಕ ಮತ್ತು ಆರ್ಥಿಕ ಸನ್ನಿವೇಶಗಳು ನಿಯಂತ್ರಿಸಿವೆ. ಇದು ಕಾದಂಬರಿಗಳಲ್ಲಿ ತಲೆಮಾರು ಸಂಘರ್ಷಕ್ಕೆ ಪ್ರಮುಖ ಕಾರಣ. ಮತ್ತೊಂದು ರೀತಿಯಲ್ಲಿ ಇದು ಕುಟುಂಬದಲ್ಲಿನ ಸಾಂಪ್ರದಾಯಿಕ ಪ್ರಜ್ಞೆ ಮತ್ತು ವ್ಯಕ್ತಿವಿಶಿಷ್ಟತಾ ಮೌಲ್ಯ ಪ್ರಜ್ಞೆಯ ನಡುವೆ ನಡೆಯುವ ಸಂಘರ್ಷವೂ ಹೌದು.

ಹೀಗೆ ಕುಸುಮಾಕರರ ಕಾದಂಬರಿಗಳಲ್ಲಿ ವ್ಯಕ್ತಿವಿಶಿಷ್ಟತೆ ಮತ್ತು ತಲೆಮಾರುಸಂಘರ್ಷಗಳು ಒಂದಕ್ಕೊಂದು ಅಂತರ್‌ಸಂಬಂಧ ಹೊಂದಿವೆ. ಇಲ್ಲಿನ ತಲೆಮಾರುಸಂಘರ್ಷಕ್ಕೆ ವ್ಯಕ್ತಿವಿಶಿಷ್ಟತೆಯು ಪ್ರಧಾನವಾದ ಕಾರಣ ಎಂಬ ಅಂಶ ಮನದಟ್ಟಾಗುತ್ತದೆ.

**ಟಿಪ್ಪಣಿಗಳು**

೧. ಸಿ.ಎನ್.ರಾಮಚಂದ್ರನ್, **'ಕುಸುಮಾಕರ ದೇವರಗೆಣ್ಣೂರರ : ಸಾಹಿತ್ಯ ಒಂದು ಸಮೀಕ್ಷೆ'**, ಪು.೧೨೩.

೨. **ಕುಸುಮಾಕರ ದೇವರಗೆಣ್ಣೂರು, 'ನಾಲ್ಕನೆಯ ಆಯಾಮ'**, ಪು.೭೧

೩. ಅದೇ, ಪು.೫೧

೪. ಸಿ.ಎನ್.ರಾಮಚಂದ್ರನ್, **'ಕುಸುಮಾಕರ ದೇವರಗೆಣ್ಣೂರರ ಸಾಹಿತ್ಯ : ಒಂದು ಸಮೀಕ್ಷೆ'**, ಪು.೧೨೭

೫. **ಕುಸುಮಾಕರ ದೇವರಗೆಣ್ಣೂರು, 'ನಿರಿಂದ್ರಿಯ'**, ಪು.೧೨೬.

೬. **ಎಚ್.ಎಂ.ಚನ್ನಯ್ಯ, 'ಕನ್ನಡ ನವ್ಯ ಚಳುವಳಿ'**, ಪು.೭೭.

೭. **ರಹಮತ್ ತರೀಕೆರೆ, 'ಜಾಗತೀಕರಣಕ್ಕೆ ಪ್ರತಿಕ್ರಿಯೆಯಾಗಿ'?**, ಪು.೨೦.

೪

# ಕುಸುಮಾಕರರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧದ ಸ್ವರೂಪ

## ನವ್ಯ ಸಾಹಿತ್ಯವು ಪುರುಷ ಪ್ರಧಾನವೇ?

ನವ್ಯ ಸಾಹಿತ್ಯದಲ್ಲಿ ಪುರುಷ ಪ್ರಧಾನತೆಯು ಗಮನ ಸೆಳೆಯುವ ಅಂಶವಾಗಿದೆ. ಸಾಮಾನ್ಯವಾಗಿ ನವ್ಯದ ಬಹುತೇಕ ಬರಹಗಾರರಲ್ಲಿ ಪುರುಷ ಪ್ರಾಧಾನ್ಯ ದೃಷ್ಟಿಕೋನವನ್ನು ಕಾಣಬಹುದು. ನವ್ಯ ಸಾಹಿತ್ಯವು ಏಕೆ ಪುರುಷಪ್ರಧಾನ ದೃಷ್ಟಿಕೋನವನ್ನು ಹೊಂದಿದೆ? ಎಂಬ ಪ್ರಶ್ನೆಯು ಸಹಜವಾಗಿಯೇ ಏಳುತ್ತದೆ. ಕಾರಣ, ನವ್ಯಸಾಹಿತ್ಯಕ್ಕೆ ಮೂಲ ಪ್ರೇರಣೆ ಪಾಶ್ಚಿಮಾತ್ಯ ಸಾಹಿತ್ಯ. ಅಲ್ಲಿನ ಅಸ್ತಿತ್ವವಾದ, ಅಸಂಗತವಾದ, ವ್ಯಕ್ತಿವಿಶಿಷ್ಟವಾದ, ಸಿಗ್ಮಂಡ್‌ಫ್ರಾಯ್ಡ್, ಆ್ಯಡ್ಲರ್, ಸಿ.ಜೆ.ಯೂಂಗ್ ರವರ ಆಧುನಿಕ ಮನಃಶಾಸ್ತ್ರೀಯ ಸಿದ್ಧಾಂತಗಳು ಕನ್ನಡದ ನವ್ಯಸಾಹಿತ್ಯಕ್ಕೆ ಪ್ರೇರಣೆ ನೀಡಿದವು. ಈ ಎಲ್ಲ ಚಿಂತನೆ, ಸಿದ್ಧಾಂತಗಳ ಚರ್ಚೆಯಲ್ಲಿ 'ಮಾನವ' ಎಂಬ ಹೆಸರಲ್ಲಿ ಬರುವುದು ಗಂಡಸೇ ಎಂಬುದು ಗಮನಿಸಬೇಕಾದ ಸಂಗತಿ.

ನವ್ಯಸಾಹಿತ್ಯದಲ್ಲಿ ಸಮುದಾಯಕ್ಕೆ ಬದಲಾಗಿ ವ್ಯಕ್ತಿಯು ಸಾಹಿತ್ಯದ ಕೇಂದ್ರಬಿಂದುವಾದ. ಅವನ ವ್ಯಕ್ತಿಗತ ನೋವು-ನಲಿವುಗಳು, ಮಾನಸಿಕ ತುಡಿತಗಳು ಸಾಹಿತ್ಯದಲ್ಲಿ ಪ್ರಾಮುಖ್ಯತೆಯನ್ನು ಪಡೆದವು. ಆ ವ್ಯಕ್ತಿಯು ಸಾಮಾನ್ಯವಾಗಿ ಪುರುಷನೇ ಆಗಿದ್ದಾನೆ. ಸಾರ್ತ್ರೆ, ಕಾಫ್ಕಾ, ಕಾಮು ಇವರ ಲೋಕದೃಷ್ಟಿ, ಸಾಹಿತ್ಯ ಚಿಂತನೆಗಳು ಕೂಡ ಪ್ರಭಾವಬೀರಿದೆ. ಅಸ್ತಿತ್ವವಾದದಂತಹ ದರ್ಶನಗಳು ನವ್ಯಸಾಹಿತ್ಯದ ಮೇಲೆ ಪ್ರಭಾವ ಬೀರಿವೆ. ನವ್ಯ ಸಾಹಿತ್ಯದಲ್ಲಿ ಪುರುಷರಿಗೆ ನೀಡಿರುವ ಪ್ರಾಧಾನ್ಯತೆಯನ್ನು ಸ್ತ್ರೀಯರಿಗೆ ನೀಡಿಲ್ಲ. ಸಾಮಾನ್ಯವಾಗಿ ಎಲ್ಲಾ ಕಡೆಗಳಲ್ಲಿಯೂ ಪುರುಷರ ಮಾನಸಿಕವಿಶ್ಲೇಷಣೆ, ಅವರು ಪಡೆಯುವ ಅನುಭವಗಳು, ಅವರ ವ್ಯಕ್ತಿತ್ವ ವಿಕಾಸ, ಅವರ ಆಂತರಿಕತುಡಿತ ತಳಮಳಗಳನ್ನು ನವ್ಯಸಾಹಿತ್ಯವು ಒಳಗೊಂಡಿದೆ.

ಹಾಗೆಯೇ ಸ್ತ್ರೀಯರ ಮಾನಸಿಕ ಸ್ಥಿತಿ, ಅವರ ಚಿಂತನೆಗಳು, ಅವರು ಪಡೆಯುವ ಅನುಭವಗಳು, ಅವರ ವ್ಯಕ್ತಿತ್ವವನ್ನು ಸಮಗ್ರವಾಗಿ ಚಿತ್ರಿಸಲು ನವ್ಯಸಾಹಿತ್ಯವು ಮುಂದಾಗಲಿಲ್ಲ. ಕಾರಣ, ಕನ್ನಡದಲ್ಲಿ ನವ್ಯಸಾಹಿತ್ಯವು ಆರಂಭವಾದ ಕಾಲದಿಂದಲೂ ಪುರುಷರೇ ಸಾಹಿತ್ಯಕೃಷಿಯಲ್ಲಿ ತೊಡಗಿದ್ದಾರೆ. ಮಹಿಳಾ ಸಾಹಿತಿಗಳು ನವ್ಯದಲ್ಲಿ ಬಾರದೆ ಇದ್ದದ್ದು ಈ ತಾರತಮ್ಯಕ್ಕೆ ಪ್ರಮುಖ ಕಾರಣವಾಗಿದೆ. ಒಬ್ಬರ ಮಾನಸಿಕ ಸ್ಥಿತಿಯನ್ನು ಮತ್ತೊಬ್ಬರು ವಿಶ್ಲೇಷಿಸುವುದು, ಅದಕ್ಕೆ ಮೂರ್ತರೂಪ ಕೊಡುವುದು ಸುಲಭದ ಕೆಲಸವಲ್ಲ. ನವ್ಯಸಾಹಿತ್ಯ ಪಂಥದಲ್ಲಿ ಪುರುಷರು ಪ್ರಧಾನವಾಗಿ ಸಾಹಿತ್ಯಸೃಷ್ಟಿಯಲ್ಲಿ ತೊಡಗಿದ್ದರಿಂದ ಪುರುಷ ಪ್ರಧಾನತೆಯು

ಸಾಹಿತ್ಯದಲ್ಲಿ ಪ್ರಾಮುಖ್ಯತೆ ಪಡೆಯಿತು. ಸ್ತ್ರೀಯರ ಅನುಭವಗಳು, ಅವರ ಮಾನಸಿಕ ಸ್ಥಿತಿಯನ್ನು ನವ್ಯದ ಬರಹಗಾರರು ಕಟ್ಟಿಕೊಡಲು ಸಾಧ್ಯವಾಗಲಿಲ್ಲ. ಕಾರಣ ನವ್ಯರು ಭಾರತೀಯ ಮಧ್ಯಮವರ್ಗದ ಸಾಂಪ್ರದಾಯಿಕ ಆಲೋಚನಾಕ್ರಮಗಳನ್ನು ಒಪ್ಪಿಕೊಂಡವರೇ ಆಗಿದ್ದರು.

ತನ್ನ ವೈಯಕ್ತಿಕ ಅನುಭವಗಳನ್ನು ಸಾರ್ವತ್ರೀಕರಣ, ಸಾಮಾನ್ಯೀಕರಣ ಮಾಡುವ ಕ್ರಿಯೆಯಲ್ಲಿ ನವ್ಯ ಸಾಹಿತಿಗಳು ತೊಡಗಿರುವಂತೆ ಕಾಣುತ್ತದೆ. ಇದರಿಂದ ಕುಸುಮಾಕರರು ಹೊರತಾಗಿಲ್ಲ. ಕುಸುಮಾಕರರ ಮೊದಲ ಎರಡು ಕಾದಂಬರಿಗಳಾದ 'ಮುಗಿಯದ ಕತೆ' ಮತ್ತು 'ನಾಲ್ಕನೆಯ ಆಯಾಮ'ಗಳಲ್ಲಿ ಹದಿಹರೆಯದ ತರುಣರ ಮಾನಸಿಕ ವಿಶ್ಲೇಷಣೆಯಿದೆ. ಆನಂತರದ 'ನಿರಿಂದ್ರಿಯ' ಕಾದಂಬರಿಯಲ್ಲಿ ಉದ್ಯೋಗಸ್ಥ ಮಧ್ಯಮ ವಯಸ್ಕವ್ಯಕ್ತಿಯ ಆಂತರಿಕತೊಳಲಾಟಗಳ ಚಿತ್ರಣವಿದೆ. ಮುಂದಿನ 'ಪರಿಘ' ಕಾದಂಬರಿಯಲ್ಲಿ ಸಾಹಿತಿಯೊಬ್ಬನ ಆಂತರಿಕತುಡಿತಗಳಿವೆ. ಇವರ ಇತ್ತೀಚಿನ 'ಬಯಲು-ಬಸಿರು' ಕಾದಂಬರಿಯಲ್ಲಿ ಆಧ್ಯಾತ್ಮಿಯೊಬ್ಬನ ಮಾನಸಿಕ ಹೊಯ್ದಾಟಗಳು ಬಂದಿವೆ. ವಯಸ್ಸಿನ ಜತೆಜತೆಯಲ್ಲೇ ಅವರ ಕಥಾನಾಯಕರೂ ಬದುಕಿದ್ದಾರೆ. ಅವರೆಲ್ಲಾ ಗಂಡಸರೇ ಆಗಿದ್ದಾರೆ. ಅವರ ಎಲ್ಲಾ ಕಾದಂಬರಿಗಳ ನಾಯಕರು ಪುರುಷರೇ.

## ನವ್ಯರ ದೃಷ್ಟಿಯಲ್ಲಿ ಗಂಡು-ಹೆಣ್ಣಿನ ಸಂಬಂಧ

ಗಂಡು-ಹೆಣ್ಣಿನ ಸಂಬಂಧಗಳನ್ನು ಪ್ರಧಾನವಾಗಿ ನವ್ಯರು ಚಿತ್ರಿಸುತ್ತಾರೆ. ನವ್ಯರಿಗೆ ಮನುಷ್ಯನ ಮೂಲಭೂತ ಪ್ರವೃತ್ತಿಗಳನ್ನು ಶೋಧಿಸುವುದು ಒಂದು ಗುಣವಾಗಿದೆ. ನವೋದಯದ ಸಂಪ್ರದಾಯಶೀಲ ಮನಸ್ಸು ಕಾಮದಂತಹ ಮೂಲಭೂತ ಪ್ರವೃತ್ತಿಯನ್ನು ಮುಚ್ಚಿಟ್ಟು ಆದರ್ಶವನ್ನು ಸಾಹಿತ್ಯದಲ್ಲಿ ತರುತಿದ್ದರು. ಕುವೆಂಪುರವರ 'ಕಾನೂರು ಹೆಗ್ಗಡಿತಿ'ಯಲ್ಲಿ ಹೂವಯ್ಯ ಮತ್ತು ಸೀತೆಯರ ನಡುವೆ ಆದರ್ಶ ಸಂಬಂಧವಿದೆ. ಇವರ ನಡುವೆ ಕಾಮದ ಸುಳಿವೇ ಇಲ್ಲವೇನೋ ಎಂಬಂತೆ ಗಂಡು-ಹೆಣ್ಣಿನ ಸಂಬಂಧ ಚಿತ್ರಣಗೊಂಡಿದೆ.

ಆದರೆ ನವ್ಯ ಸಾಹಿತ್ಯವು ಈ ಸಂಪ್ರದಾಯಶೀಲತೆಯನ್ನು ನಿರಾಕರಿಸಿ ವಾಸ್ತವಕ್ಕೆ ಹತ್ತಿರವಾಗುವ ಉದ್ದೇಶದಿಂದ ಗಂಡು-ಹೆಣ್ಣಿನ ಸಂಬಂಧವನ್ನು ಸಹಜವಾಗಿ ತರಲು ಪ್ರಾರಂಭಿಸಿದರು.

ಕಾಮವು ಮನುಷ್ಯನ ಮೂಲಭೂತವಾದ ಸಹಜ ಪ್ರವೃತ್ತಿ. ಅದು ವ್ಯಕ್ತಿಯ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರುತ್ತದೆ. ಕಾಮದ ತೀವ್ರತೆ, ದೈಹಿಕ ಆಕರ್ಷಣೆ ಇವೆಲ್ಲವೂ ಸ್ವಾಭಾವಿಕವಾದವು. ನವ್ಯರಿಗೆ ಆದರ್ಶಕ್ಕಿಂತ ನೈಸರ್ಗಿಕವಾದ ಅಂಶಗಳು ಪ್ರಧಾನವಾಗಿ ಕಂಡವು. ಕಾಮಕ್ಕೆ ಪೂರಕವಾಗಿರುವ ಗಂಡು-ಹೆಣ್ಣಿನ ಲೈಂಗಿಕ ಸಂಬಂಧ, ನಂತರ ಮಾನವ ಮನಸ್ಸಿನ ಶೋಧ, ಜೀವನದ ಅರ್ಥಶೋಧ ಮುಖ್ಯ. ಆದ್ದರಿಂದಲೇ ನವ್ಯ ಸಾಹಿತ್ಯ ಕೃತಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧಗಳು ಪ್ರಾಮುಖ್ಯವನ್ನು ಪಡೆದುಕೊಂಡವು.

## ಕುಸುಮಾಕರರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧದ ಸ್ವರೂಪ.

ಕುಸುಮಾಕರರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧವು ಒಂದು ಪ್ರಧಾನ ಆಶಯವಾಗಿ ಮೂಡಿಬಂದಿದೆ. ಕೆಲವು ಕಡೆ ದಾಂಪತ್ಯ ಜೀವನವು ಮಧುರವಾಗಿದ್ದರೆ ಮತ್ತೆ ಕೆಲವು ಕಡೆಗಳಲ್ಲಿ

ದಾಂಪತ್ಯದಲ್ಲಿ ಬಿರುಕು ಕಂಡುಬರುತ್ತದೆ. ಇನ್ನು ಕೆಲವು ಕಡೆ ದಾಂಪತ್ಯವು ಹೊಂದಾಣಿಕೆಯಿಂದ ವಿರಸದೆಡೆಗೆ ನಡೆಯುತ್ತದೆ. ವಿರಸದಿಂದ ಹೊಂದಾಣಿಕೆಯೆಡೆಗೆ ನಡೆಯುತ್ತದೆ. ಆದರೂ ಕುಸುಮಾಕರರ ಕಾದಂಬರಿಗಳಲ್ಲಿ ವಿಘಟನೆಗೊಂಡ ದಾಂಪತ್ಯವೇ ಅಧಿಕ ಎಂದು ಹೇಳಬಹುದು.

'ಮುಗಿಯದ ಕತೆ' ಕಾದಂಬರಿಯಲ್ಲಿ ದೇಶಪಾಂಡೆ-ಸರಸ್ವತಿಯರ ದಾಂಪತ್ಯ ಜೀವನವು ವಿರಸದಲ್ಲಿ ಮುಗಿಯುತ್ತದೆ. 'ನಾಲ್ಕನೆಯ ಆಯಾಮ'ದಲ್ಲಿ ದಾಂಪತ್ಯದಲ್ಲಿ ಹೊಂದಾಣಿಕೆ ಕಂಡು ಬರುವುದಿಲ್ಲ. ಬದಲಾಗಿ ಕಾದಂಬರಿಯು ಕಾಮದ ತೀವ್ರತೆಗೆ ಹೆಚ್ಚು ಆದ್ಯತೆ ನೀಡಿರುವಂತೆ ಕಂಡುಬರುತ್ತದೆ. 'ನಿರಿಂದ್ರಿಯ' ಕಾದಂಬರಿಯು ಮಧುರದಾಂಪತ್ಯ ಮತ್ತು ಬಿರುಕಿನ ದಾಂಪತ್ಯದ ಮಿಶ್ರಣ. ರೊಳ್ಳಿ ಮತ್ತು ವೃಂದಾರ ದಾಂಪತ್ಯದಲ್ಲಿ ಹೊಂದಾಣಿಕೆಯ ಕೊರತೆಯಿದ್ದರೆ, ನಂದಾ ಮತ್ತು ವಿಜಯರ ದಾಂಪತ್ಯದ ನಡುವೆ ಹೊಂದಾಣಿಕೆ ಕಂಡುಬರುತ್ತದೆ. ಕುಸುಮಾಕರರ ಕಾದಂಬರಿಗಳಲ್ಲಿ ದುರ್ಬಲ ನಾಯಕನ ಮನೋವಿಶ್ಲೇಷಣೆಗೆ ಪ್ರತಿಪಾತ್ರ ತರುವಂತೆ, ಒಡೆದ ದಾಂಪತ್ಯದ ಎದುರು ಸಾಮರಸ್ಯದ ದಾಂಪತ್ಯ ತಂದಿರುವ ಸಾಧ್ಯತೆಯಿದೆ. ಇಲ್ಲಿನ ರೊಳ್ಳಿ ಮತ್ತು ವೃಂದಾರ ಮುರಿದ ದಾಂಪತ್ಯದ ಮೂಲಕ ನಂದಾ ಮತ್ತು ವಿಜಯರ ಮಧುರ ದಾಂಪತ್ಯವನ್ನು ಕಾದಂಬರಿಯಲ್ಲಿ ನೋಡಲಾಗಿದೆ. ಇದರಿಂದ ರೊಳ್ಳಿ ಮತ್ತು ವೃಂದಾರ ದಾಂಪತ್ಯವನ್ನು ಹೆಚ್ಚು ಸ್ಪಷ್ಟವಾಗಿ ಕಾದಂಬರಿಯು ಚಿತ್ರಿಸುತ್ತದೆ. ಆದರೆ ಈ ತಂತ್ರ ಇದೊಂದು ಕಾದಂಬರಿಯಲ್ಲಿ ಬಳಕೆಯಾಗಿರುವುದು ಸೋಜಿಗದ ಸಂಗತಿ. 'ಪರಿಘ' ಕಾದಂಬರಿಯಲ್ಲಿ ದಾಂಪತ್ಯದಲ್ಲಿನ ಬಿರುಕು ಮುಂದುವರೆದಿದೆ, 'ಬಯಲು-ಬಸಿರು' ಕಾದಂಬರಿಯಲ್ಲಿ ದಾಂಪತ್ಯದ ಬಿರುಕು ಪರಾಕಾಷ್ಠೆಯನ್ನು ತಲುಪಿದೆ ಎಂದು ಹೇಳಬಹುದು.

ಕುಸುಮಾಕರರ ಕಾದಂಬರಿಗಳಲ್ಲಿ ಕಾಮ ಮತ್ತು ಪ್ರೇಮದ ನಡುವೆ ಸಂಘರ್ಷವಿದೆ. ಇವರ ಕಾದಂಬರಿಗಳ ಎಲ್ಲಾ ಕಡೆಗಳಲ್ಲಿ ದಂಪತಿಗಳ ನಡುವೆ ದೈಹಿಕ ಸಂಬಂಧದಿಂದ ಸಮಸ್ಯೆ ಹುಟ್ಟಿಲ್ಲ. ಗಂಡ ಹೆಂಡಿರ ನಡುವೆ ತೃಪ್ತಿಯಿದ್ದರೂ, ಯಾವುದೋ ಒಂದು ಬಗೆಯ ಮಾನಸಿಕ ಅಶಾಂತಿಯಿಂದ ತೊಳಲಾಡುತ್ತವೆ. ಯಾವುದೋ ಜೀವನದ ಅರ್ಥಕ್ಕಾಗಿ ಹುಡುಕಾಟ ನಡೆಸುತ್ತವೆ. ಇದು ಕುಸುಮಾಕರರ ಅನ್ವೇಷಣ ಪ್ರವೃತ್ತಿಯೂ ಹೌದು. ಅದರ ಅನ್ವೇಷಣೆಯು ಎಲ್ಲಾ ಕಾದಂಬರಿಗಳಲ್ಲಿ ನಡೆದಿದೆ. ಕಾಮದಿಂದ ಮುಕ್ತವಾದ ಪ್ರೇಮವು ಮಧುರ ದಾಂಪತ್ಯಕ್ಕೆ ಅವಶ್ಯಕ ಎಂಬ ನಿಲುವು ಕಾದಂಬರಿಗಳಲ್ಲಿದೆ. ಈ ಅನ್ವೇಷಣೆಯು ಸಾಮಾನ್ಯವಾಗಿ ಎಲ್ಲಾ ಕಾದಂಬರಿಗಳಲ್ಲಿಯೂ ಇದೆ. ಕಾಮವನ್ನು ಮೀರಿದ ಒಂದು ರೀತಿಯ ಅಲೌಕಿಕ ಸುಖಕ್ಕಾಗಿ ಇಲ್ಲಿನ ಪಾತ್ರಗಳು ಹುಡುಕಾಡುತ್ತವೆ. ಇವರ ಎಲ್ಲಾ ಕಾದಂಬರಿಗಳಲ್ಲಿ ದಂಪತಿಗಳ ನಡುವೆ ಭಾವನಾತ್ಮಕ ಹೊಂದಾಣಿಕೆಯ ಕೊರತೆ ಕಂಡುಬರುತ್ತದೆ.

'ಮುಗಿಯದ ಕತೆ'ಯಲ್ಲಿನ ದೇಶಪಾಂಡೆ ಮತ್ತು ಸರಸ್ವತಿಯರ ದಾಂಪತ್ಯವನ್ನು ನೋಡುವುದಾದರೆ, ದೇಶಪಾಂಡೆಗೆ ಜೀವನದಲ್ಲಿ ರಿಕ್ತತೆ ಭಯ ಆವರಿಸಿದೆ. ಆಧುನಿಕ ನಾಗರಿಕತೆಗೆ ಸ್ಪಂದಿಸಲಾರದೆ ಕೀಳರಿಮೆ

ಆವರಿಸಿದೆ. ಒಂಟಿತನ ಕಾಡುತ್ತಿದೆ. ಇಂತಹ ಗಂಡನಿಗೆ ಹೆಂಡತಿಯಾದ ಸರಸ್ವತಿಯು ಅವನ ಅಭ್ಯುದಯವನ್ನು ಬಯಸಿ ಅವನಿಗೆ ಮಾನಸಿಕ ಪ್ರೇರಣೆಯನ್ನು ನೀಡುವ ರೀತಿಯದು.

> "ಏನು ನಿಮ್ಮ ಮೊದ್ದುತನ. ನಾನು ಹೇಳಿ ಮಾಡುವದೇನು. ಗಂಡಸಿನಲ್ಲಿ ಹೆಣ್ಣು ರೂಪವನ್ನು ಮೆಚ್ಚುತ್ತದೆ. ಇಲ್ಲವೆನ್ನುವುದಿಲ್ಲ. ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಸಾಹಸವನ್ನು ಮೆಚ್ಚುತ್ತದೆ. ಹೇಡಿತನ ಅಸಹ್ಯವೆನಿಸುತ್ತದೆ."[೧]

ಸರಸ್ವತಿ ತನ್ನ ಗಂಡನಿಗೆ ನೀಡುತ್ತಿರುವ ಪ್ರೇರಣೆಯ ಹಿಂದೆಯೇ ಅವಳ ಸಹಜ ಬಯಕೆಗಳಿವೆ. ಆದರೂ ಅದುವರೆಗೂ ಮರೀಚಿಕೆಯಾಗಿದ್ದ ಗಂಡನ ವ್ಯಕ್ತಿತ್ವದ ಭಾವನಾತ್ಮಕ ಬೆಳವಣಿಗೆಗೆ ಸಹಾಯಕಳಾಗುತ್ತಾಳೆ. ಆದರೆ ದೇಶಪಾಂಡೆ ಸ್ಪಂದಿಸದಿದ್ದಾಗ ದಾಂಪತ್ಯದಲ್ಲಿ ಬಿರುಕು ಆರಂಭವಾಗುತ್ತದೆ.

'ನಿರಿಂದ್ರಿಯ' ಕಾದಂಬರಿಯ ರೊಳ್ಳಿಯು ಯಾಂತ್ರಿಕತೆಯಿಂದ ಕೂಡಿದ ತನ್ನ ಜೀವನದಲ್ಲಿ ದೇಶಪಾಂಡೆಯ ರೀತಿಯಲ್ಲಿಯೇ ಭಾವನಾತ್ಮಕ ಸಮಸ್ಯೆಗಳನ್ನು ಎದುರಿಸುತ್ತಾನೆ. ವೃಂದಾಳನ್ನು ಮದುವೆಯಾಗಿ ಮೂರು ಮಕ್ಕಳನ್ನು ಪಡೆದರೂ, ಅವರ ದಾಂಪತ್ಯ ಜೀವನವು ಕಾಮದ ವ್ಯಾಪ್ತಿಯನ್ನು ಮೀರುವುದೆ ಇಲ್ಲ. ಮಾನಸಿಕ ಶಾಂತಿಯು ದೊರೆಯದೆ ಮಾನಸಿಕ ದೌರ್ಬಲ್ಯಕ್ಕೆ ಒಳಗಾಗುತ್ತಾನೆ. ಯಾವುದೋ ಅವ್ಯಕ್ತ ಆನಂದಕ್ಕಾಗಿ ಹುಡುಕಾಡುತ್ತಾನೆ. ಕಾದಂಬರಿಯ ಕಡೆಯಲ್ಲಿ ವೃಂದಾಳಿಂದ ಅದು ದೊರೆಯುತ್ತದೆ.

> "ಗಂಡ ಎಳೆಯ ಮಗುವಿನಂತೆ ಆಗಿದ್ದಾನೆ. ಅವಳಿಗೆ ಹಾಸಿಗೆಯಲ್ಲಿ ತನ್ನ ಮಗುವೆ ಮಲಗಿದ ಭಾಸವಾಯಿತು. ಪುತ್ರ ವಾತ್ಸಲ್ಯದಿಂದ ಅವನ ಗದ್ದವನ್ನು ಹಿಡಿದು ಹಣೆಗೊಂದು ಮೆಲ್ಲನೆ ಮುದ್ದಿಟ್ಟಳು. ರೊಳ್ಳಿ ಮೆಲ್ಲನೆ ನಕ್ಕ"[೨]

ಈ ರೀತಿಯ ಮಾತೃ ಪ್ರೇಮವು ಹೆಂಡತಿಯಿಂದ ದೊರೆತ ಮೇಲೆಯೇ ರೊಳ್ಳಿಯ ವ್ಯಕ್ತಿತ್ವ ಸಮಗ್ರತೆಯನ್ನು ಪಡೆಯುತ್ತದೆ.

'ಪರಿಘ' ಕಾದಂಬರಿಯ ಅಜೇಯ ಮತ್ತು ಪ್ರತಿಮಾಳ ದಾಂಪತ್ಯದಲ್ಲಿಯೂ ಇದು ವ್ಯಕ್ತವಾಗುತ್ತದೆ. ಇವರ ದಾಂಪತ್ಯದಲ್ಲಿನ ಪ್ರೇಮ ಕಾಮದ ಅಡಿಯಾಳಾಗಿಯೇ ಬಾಳಿತು. ಕಾಮದಿಂದ ಆಚೆಗಿನ ಪ್ರೇಮಕ್ಕಾಗಿ ಅಜೇಯ ಹುಡುಕಾಡುತ್ತಾನೆ, ಪರಿತಪಿಸುತ್ತಾನೆ. ಇಲ್ಲಿನ ಪ್ರತಿಮಾ ಮುಗ್ಧೆ, ಗಂಡನ ಸ್ವಭಾವಕ್ಕನುಗುಣವಾಗಿ ಹೇಗೆ ನಡೆಯಬೇಕೆಂದು ತಿಳಿಯದೆ ಕೆಲವು ಸಮಯ ಅತ್ತೆಯನ್ನು ಕೇಳುತ್ತಾಳೆ. ಪ್ರತಿಮಾಳು ಹಳ್ಳಿಯ ಹುಡುಗಿ ಅನಕ್ಷರಸ್ಥೆ. ಆದರೆ ಅಜೇಯ ನಗರ ಪರಿಸರದಲ್ಲಿ ಬೆಳೆದವ, ವಿದ್ಯಾವಂತ, ಶ್ರೇಷ್ಠಕವಿ. ಇವರಿಬ್ಬರಲ್ಲಿರುವ ಅಂತರವು ದಾಂಪತ್ಯದಲ್ಲಿನ ಬಿರುಕಿಗೆ ಪ್ರಮುಖ ಕಾರಣವಾಗಿ ಕಾಣುತ್ತದೆ. ಮಾನಸಿಕ ಶಾಂತಿಯನ್ನು ಪಡೆಯಲು ಭ್ರಮೆ, ಹಗಲುಗನಸುಗಳನ್ನು ಸೃಷ್ಟಿಸಿ ಅದರಿಂದ ನೆಮ್ಮದಿಯನ್ನು ಪಡೆಯಲು ಪ್ರಯತ್ನಿಸುತ್ತಾನೆ. ವಾಸ್ತವದಿಂದ ದೂರ ಜಾರುತ್ತಾನೆ. ಕಾದಂಬರಿಯ ಕೊನೆಯಲ್ಲಿ ವೃದ್ಧಾಪ್ಯದಲ್ಲಿ ಅಜೇಯನಿಗೆ ದರ್ಶನ ದೊರೆಯುತ್ತದೆ. ಕಾಮವನ್ನು ಮೀರಿದ ಪ್ರೇಮದ ಅನುಭವವನ್ನು ಪಡೆಯುತ್ತಾನೆ. ಭ್ರಮೆ-ಹಗಲುಗನಸುಗಳನ್ನು

ದಾಟಿ ವಾಸ್ತವದ ಬದುಕಿಗೆ ಮರಳಿ ಬರುತ್ತಾನೆ. ದಾಂಪತ್ಯದಲ್ಲಿ ಗಂಡು-ಹೆಣ್ಣಿನ ಸಂಬಂಧವು ಮಾತೃಪ್ರೇಮದ ಸ್ವರೂಪದಿಂದಿರಬೇಕು ಎಂಬ ಧೋರಣೆಯು ಕಾದಂಬರಿಯಲ್ಲಿದೆ.

ಕಾಮದಿಂದಾಚೆಗಿನ ಪ್ರೇಮವೇ ದಾಂಪತ್ಯ ಜೀವನದ ಯಶಸ್ಸಿನ ಗುಟ್ಟು. ಇದರ ಕಡೆಗೆ ಎಲ್ಲಾ ಕಾದಂಬರಿಗಳು ಒಲವು ತಾಳುತ್ತವೆ.

"ಅಜೇಯನಿಗೆ ಧೈರ್ಯ ಬಂದಿತು. ಪ್ರತಿಮಾಳ ತೊಡೆಯ ಮೇಲೆ ಹಸುಗೂಸಿನಂತೆ ತಲೆ ಇಟ್ಟು ಮಲಗಿಕೊಂಡ. ಅವಳು ಮೆಲ್ಲಮೆಲ್ಲನೆ ಅವನ ತಲೆಯನ್ನು ತಟ್ಟುತ್ತಿದ್ದಳು"[೩]

-'ಪರಿಘ' ಕಾದಂಬರಿಯ ಕಡೆಯಲ್ಲಿ ಬರುವ ಈ ಮೇಲ್ಕಂಡ ನಿರೂಪಣೆಯಲ್ಲಿಯೇ ಇದು ವ್ಯಕ್ತವಾಗುತ್ತದೆ. ಇದೇ ರೀತಿಯ ಪ್ರೇಮವನ್ನು ರೊಳ್ಳಿಯು ವೃಂದಾಳಿಂದ ಪಡೆಯುವುದನ್ನು 'ನಿರಿಂದ್ರಿಯ' ಕಾದಂಬರಿಯಲ್ಲಿ ಈಗಾಗಲೇ ನೋಡಿದ್ದೇವೆ.

ಮಾನವರು ತಂತಮ್ಮ ಗುರುತು ಅಸ್ತಿತ್ವಕ್ಕಾಗಿ ಹೋರಾಟ ಮಾಡುತ್ತಾರೆ. ಇದು ಕುಸುಮಾಕರರ ಕಾದಂಬರಿಗಳಲ್ಲಿ ದಾಂಪತ್ಯದ ಬಿರುಕಿಗೆ ಪ್ರಧಾನ ಕಾರಣ ಎನ್ನಬಹುದು. ಮಾನಸಿಕ ದೌರ್ಬಲ್ಯದಿಂದ, ಅಗಾಧ ಕೀಳರಿಮೆಯಿಂದ ನರಳುತ್ತಿದ್ದ ದೇಶಪಾಂಡೆಯ ಕೈಹಿಡಿದ ಮೇಲೆ ಸರಸ್ವತಿ ಅವನಲ್ಲಿ ಬದಲಾವಣೆ ತರಲು ಪ್ರಯತ್ನಿಸುತ್ತಾಳೆ. ಸಾಯಿಬಾಬಾನ ಭಕ್ತಳಾಗಿದ್ದ ಆಕೆ ಅವನಲ್ಲಿ ದೈವದ ನಂಬಿಕೆಯನ್ನು ಭಿತ್ತಿ, ಸ್ವಲ್ಪ ಮಾನಸಿಕವಾಗಿ ದೃಢನನ್ನಾಗಿಸುತ್ತಾಳೆ. ನಂತರ ಉನ್ನತ ವಿದ್ಯಾಭ್ಯಾಸಕ್ಕೆ ನೆರವಾಗಿ, ಉಪಾಧ್ಯಾಯವೃತ್ತಿ ಖಾಯಂ ಆಗುವಲ್ಲಿ ಸಹಕರಿಸುತ್ತಾಳೆ. ದೇಶಪಾಂಡೆಯ ವ್ಯಕ್ತಿತ್ವದ ವಿಕಾಸದ ಹಿಂದೆ ಸರಸ್ವತಿಯ ಪಾತ್ರ ಬಹುಮುಖ್ಯವಾದುದು. ದೇಶಪಾಂಡಗೆ ಮುಖ್ಯೋಪಾಧ್ಯಾಯರ ಹುದ್ದೆಯು ದೊರೆತು ಹೊರದೇಶಕ್ಕೆ ಹೋಗಿ ಬಂದ ತರುವಾಯ ಸಾಮಾಜಿಕವಾಗಿ ಅವನ ಸ್ಥಾನಮಾನಗಳು ಮೇಲ್ದರ್ಜೆಗೇರುತ್ತವೆ.

ಗಂಡನ ಈ ರೀತಿಯ ಬೆಳವಣಿಗೆಗೆ ತಾನೇ ಕಾರಣ ಎಂದು ಸರಸ್ವತಿ ಹೇಳಿಕೊಂಡರೆ ದೇಶಪಾಂಡೆಯು ಅದನ್ನು ಸಹಿಸುವುದಿಲ್ಲ. ಇಲ್ಲಿಂದಲೇ ಇವರಿಬ್ಬರೂ ಭಾವನಾತ್ಮಕವಾಗಿ ದೂರ ಸರಿಯಲು ಪ್ರಾರಂಭಿಸುತ್ತಾರೆ. ದಾಂಪತ್ಯದ ವಿರಸಕ್ಕೆ ಸರಸ್ವತಿ ಮತ್ತು ದೇಶಪಾಂಡೆಯರ ಅಹಂ ಪ್ರವೃತ್ತಿ ಕಾರಣವಾಗುತ್ತದೆ. ಇದನ್ನು 'ನಿರಿಂದ್ರಿಯ' ಕಾದಂಬರಿಯಲ್ಲಿಯೂ ಕಾಣಬಹುದು. ಇಲ್ಲಿನ ವೃಂದಾ ತಾನು ರೊಳ್ಳಿಯನ್ನು ಮದುವೆಯಾದ ಮೇಲೆ ಈ ಮನೆಗೆ ಏಳ್ಗೆಯಾಯಿತು ಎಂದು ಹೇಳುತ್ತಿರುತ್ತಾಳೆ. ಇದನ್ನು ರೊಳ್ಳಿಯು ವಿರೋಧಿಸುತ್ತಾನೆ. ಕುಟುಂಬದಲ್ಲಿನ ಗಂಡ-ಹೆಂಡತಿಯ ನಡುವೆ ಇದು ವಿರಸಕ್ಕೆ ನಾಂದಿಯಾಗುತ್ತದೆ. ಕುಸುಮಾಕರರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧದಲ್ಲಿ ಅಹಂ ಕೇಂದ್ರಿತ ಮನುಷ್ಯನ ಪ್ರಜ್ಞೆ ಮತ್ತು ಅಸ್ತಿತ್ವವಾದದ ಹಿನ್ನೆಲೆಯನ್ನು ಕಾಣಬಹುದು.

ಕುಸುಮಾಕರರ 'ಮುಗಿಯದ ಕತೆ'ಯಲ್ಲಿನ ದೇಶಪಾಂಡೆ ಸರಸ್ವತಿಯೊಡನೆ ವಿವಾಹವಾಗಿದ್ದರೂ, ಬಿ.ಇಡಿ ವ್ಯಾಸಂಗಕ್ಕೆಂದು ಹೆಂಡತಿಯನ್ನು ಅಗಲಿ, ದೂರದ ಪಟ್ಟಣಕ್ಕೆ ಹೋಗುತ್ತಾನೆ. ಅವನು ಅಲ್ಲಿದ್ದ ಕೆಲವೇ

ದಿನಗಳಲ್ಲಿ ತನ್ನ ತರಗತಿಯಲ್ಲಿ ಓದುತ್ತಿರುವ ಶೈಲಜಾ ಎಂಬ ಹುಡುಗಿಯಿಂದ ಆಕರ್ಷಣೆಗೊಳಗಾಗುತ್ತಾನೆ. ಇದರ ಜೊತೆಗೆ ದೇಶಪಾಂಡೆಯ ಮೇಲೆ ಪರಿಸರ ಮತ್ತು ಭೌತಿಕ ಸಾಮೀಪ್ಯಗಳು ಪ್ರಭಾವ ಬೀರಿರುವ ಸಾಧ್ಯತೆಯಿದೆ. ದೇಶಪಾಂಡೆ ಹೊಸ ಪರಿಸರಕ್ಕೆ ಬಂದನಂತರ ಅಲ್ಲಿಗೆ ನಿಧಾನವಾಗಿ ಹೊಂದಿಕೊಳ್ಳುತ್ತಾನೆ. ತನ್ನ ಸುತ್ತಲಿನ ಪರಿಸರವನ್ನು ಇಷ್ಟಪಡುತ್ತಾನೆ. ತನ್ನ ನೆರೆಹೊರೆಯವರೊಂದಿಗೆ ಹೊಸ ಭಾವನಾತ್ಮಕ ಸಂಬಂಧ ಪಡೆಯಲಿಚ್ಛಿಸುತ್ತಾನೆ. ಬಿ.ಇಡಿಗೆ ಬಂದ ದೇಶಪಾಂಡೆಗೆ ಶೈಲಜಾಳು ಭೌತಿಕವಾಗಿ ಸನಿಹದಲ್ಲಿದ್ದುದೇ ಆಕರ್ಷಣೆಗೆ ಕಾರಣವಾಗಿದೆ. ಇದೇ ರೀತಿಯಲ್ಲಿ 'ನಾಲ್ಕನೆಯ ಆಯಾಮ'ದಲ್ಲಿನ ಮನೋಜ್ ಕುಮಾರನ ವ್ಯಕ್ತಿತ್ವವೂ ಇದೆ. ವಿದ್ಯಾಭ್ಯಾಸಕ್ಕೆಂದು ಬೇರೊಂದು ನಗರಕ್ಕೆ ಹೋದ ಅವನು ತನ್ನ ತಾಯಿಯ ಗೆಳತಿಯ ಮನೆಯಲ್ಲಿ ಉಳಿದುಕೊಳ್ಳುತ್ತಾನೆ. ಅಲ್ಲಿದ್ದಾಗಲೇ ತಾಯಿಯ ಗೆಳತಿಯ ಮಗಳಿಂದ ಆಕರ್ಷಣೆ ಹೊಂದಿ ಆಕೆಯನ್ನು ಪ್ರೀತಿಸುತ್ತಾನೆ. ಕೆಲವು ವರ್ಷಗಳ ತರುವಾಯ ಪಕ್ಕದ ಮನೆಯ ಹುಡುಗಿಗೆ ನೃತ್ಯಕಲಿಸುವ ಉದ್ದೇಶದಿಂದ ಹಳೆಯ ಪ್ರೇಯಸಿಯನ್ನು ಮರೆಯದಿದ್ದರೂ, ಅವಳ ದೈಹಿಕ ಆಕರ್ಷಣೆಗೆ ಒಳಗಾಗುತ್ತಾನೆ. ಜೊತೆಗೆ ಕುಸುಮಾಕರರ ಕಾದಂಬರಿಗಳು ಪುರುಷಪ್ರಧಾನ ನೆಲೆಯಲ್ಲಿ ಹೊರಡುವುದರಿಂದ ತನ್ನ ಗಂಡಸುತನದ ಸಮರ್ಥನೆ ಮಾಡಬೇಕೆಂಬ ಇರಾದೆಯೂ ಇರುನಂತಿದೆ. 'ನಿರಿಂದ್ರಿಯ' ಕಾದಂಬರಿಯ ರೊಳ್ಳಿಯಲ್ಲಿ ಇದೇ ರೀತಿಯ ಪ್ರವೃತ್ತಿಯನ್ನು ಕಾಣಬಹುದು. ತನ್ನ ಹೆಂಡತಿಯೊಂದಿಗೆ ಜೊತೆಯಲ್ಲಿ ಮಾರುಕಟ್ಟೆ ಅಂಗಡಿಗಳಿಗೆ ಹೋದಾಗ ರಸ್ತೆಯಲ್ಲಿ ಹೋಗುತ್ತಿರುವ ಪರಸ್ತ್ರೀಯರ ಆಕರ್ಷಣೆಗೆ ರೊಳ್ಳಿಯು ಒಳಗಾಗುತ್ತಾನೆ. 'ಬಯಲು-ಬಸಿರು' ಕಾದಂಬರಿಯಲ್ಲಿ ಜೆಸ್ಸಿ ಮತ್ತು ಕಸಿನ್ಸ್ ರ ದಾಂಪತ್ಯ ಜೀವನವು ಮುರಿದು ಬೀಳಲು ಅವನು ಪರಸ್ತ್ರೀಯರಲ್ಲಿ ಹೊಂದುವ ಆಕರ್ಷಣೆಯು ಪ್ರಮುಖ ಕಾರಣವಾಗಿದೆ.

ಇವರೆಲ್ಲರ ಈ ರೀತಿಯ ನಡವಳಿಕೆಗೆ ಏನು ಕಾರಣ? ಮನುಷ್ಯನ ಮೂಲಪ್ರಜ್ಞೆಯ ಸ್ವರೂಪವೇ? ದೈಹಿಕ ಆಕರ್ಷಣೆ, ಲೈಂಗಿಕ ಪ್ರವೃತ್ತಿ ಇವೆಲ್ಲವು ಮಾನವರಿಗೆ ಸಹಜವಾದವು. ಗಂಡ, ಹೆಂಡತಿ, ದಾಂಪತ್ಯ-ಕುಟುಂಬ ಮುಂತಾದವುಗಳೆಲ್ಲವೂ ನಾಗರಿಕತೆಯ ಹೆಸರಿನಲ್ಲಿ ತಾವೇ ನಿರ್ಮಿಸಿಕೊಂಡ ಕೃತಕ ಚೌಕಟ್ಟುಗಳು. ಸೃಷ್ಟಿಯಲ್ಲಿ ನೈತಿಕ-ಅನೈತಿಕ ಎಂಬ ಭೇದಭಾವವೇ ಇಲ್ಲ. ಅವುಗಳೆಲ್ಲವೂ ನಾಗರಿಕತೆಯ ನಿರ್ಮಾಣ. ಮನುಷ್ಯನ ಮೂಲಪ್ರಜ್ಞೆ ಈ ಎಲ್ಲಾ ಚೌಕಟ್ಟುಗಳಾಚೆ ಕೆಲವೊಮ್ಮೆ ಕಾರ್ಯಪ್ರವೃತ್ತವಾಗುತ್ತದೆ. ಇದರ ಪರಿಣಾಮವಾಗಿಯೇ ಕುಸುಮಾಕರರ ಕಾದಂಬರಿಗಳಲ್ಲಿನ ಪಾತ್ರಗಳು ವಿವಾಹಿತರಾಗಿದ್ದರೂ ಬೇರೆ ಹೆಣ್ಣುಗಳಿಂದ ಆಕರ್ಷಿತರಾಗುತ್ತಾರೆ. ಅನೈತಿಕ ಎನ್ನುವಂತಹ ಸಂಬಂಧಗಳನ್ನು ಬಯಸುತ್ತವೆ. ಇವರ ಕಾದಂಬರಿಗಳಿಗೆ ಮನಃಶಾಸ್ತ್ರವು ಹಿನ್ನೆಲೆಯಾಗಿದೆ. ಆದ್ದರಿಂದ ಮನುಷ್ಯನ ಸ್ವಾಭಾವಿಕ ಪ್ರವೃತ್ತಿಗಳ ಕಡೆಗೆ ಕಾದಂಬರಿಗಳು ಹೆಚ್ಚಿನ ಒಲವು ಪಡೆದಿವೆ.

'ನಾಲ್ಕನೆಯ ಆಯಾಮ'ದಲ್ಲಿನ ಕಥಾನಾಯಕನು ಪ್ರೇಮಿಸುವ ತನ್ನ ತಾಯಿಯ ಗೆಳತಿಯ ಮಗಳನ್ನು ಅವನು ಕಾದಂಬರಿಯ ಅಂತ್ಯದವರೆಗೂ ಮರೆಯುವುದೇ ಇಲ್ಲ. ಅವನು ಪಡೆಯುವ ಪ್ರೇಮದ ಅನುಭವವು ಅವನ ಜೀವನದಲ್ಲಿ ಶಾಶ್ವತವಾಗಿ ನೆಲೆಯೂರಿ ನಿಲ್ಲುತ್ತದೆ. ಇದು ಅವನ ವ್ಯಕ್ತಿತ್ವದ ಬೆಳವಣಿಗೆಯ ಮೇಲೆ

ಸಾಕಷ್ಟು ಪ್ರಭಾವವನ್ನುಂಟು ಮಾಡುತ್ತದೆ. 'ನಿರಿಂದ್ರಿಯ' ಕಾದಂಬರಿಯಲ್ಲಿನ ಒಂದು ಸನ್ನಿವೇಶವನ್ನು ಗಮನಿಸಬಹುದು. ವೃಂದಾಳ ಬಾಲ್ಯದಲ್ಲಿನ ಒಂದು ನೆನಪು ಇದು-

> "ಆ ಹುಡುಗ ಎಷ್ಟು ಕತೆ ಹೇಳುತ್ತಿದ್ದ, ನಗಿಸುತ್ತಿದ್ದ ಅವರ ದಿನಬಳಕೆಯಲ್ಲಿಲ್ಲದ ಹೊಸವಸ್ತುಗಳನ್ನು ತಂದಿದ್ದ. ಕಸ್ತೂರಬಾನ ಕತೆಯನ್ನು ಹೇಳಿದ್ದ. ಅವನನ್ನು ನೋಡಿದ್ದು ಒಂದೇ ಸಲ. ಏನೋ ಹುಚ್ಚು ಆಸೆ ಚಿಗುರಿತು, ಅವನನ್ನು ತಾನು ಮದುವೆಯಾಗಬೇಕು. ಅವನು ನನ್ನನ್ನು ಒಲಿಯಬಹುದೆ? ಅವನನ್ನು ಒಲಿಸುವ ಚೆಲುವಿಕೆ ನನ್ನಲಿದೆಯೇ? ಅವನಿಗೆ ತಕ್ಕ ಜೊತೆಯವಳಾಗಿ ಬಾಳಬಲ್ಲ ಯೋಗ್ಯತೆ, ಜಾಣ್ಮೆ ನನ್ನಲ್ಲಿದೆಯೆ? ಅವನು ಎಲ್ಲಿ? ನಾನು ಎಲ್ಲಿ? ಎಂಬ ಉದಾಸಭಾವ ಉಂಟಾಯಿತು. ಆ ಚಿಗುರು ಮೀಸೆ, ಯಾರನ್ನು ಸೆಳೆಯಬಲ್ಲ ಮಾಟಾದ ನಿಲುವು, ಮೋಹಕವಾದ ಮಾಸದ ಮುಗುಳುನಗೆ, ಆದರೂ ಈ ಮೈಮಾಟವನ್ನು ಮೀರಿ ಏನೋ ಒಂದು ತಿಳಿಯದ ಸತ್ವ ಅವನಲ್ಲಿ. ಅದು ತನ್ನ ಮೇಲೆ ದಟ್ಟವಾದ ಪರಿಣಾಮವನ್ನು ಬೀರಿತು. ಈಗ ಎಲ್ಲಿದ್ದಾನೊ? ಅವನ ಕೈ ಹಿಡಿದವಳು ಯಾರು? ಅವರ ಬದುಕು ಹೀಗೆ ಆಗಿರಲಿಕ್ಕಿಲ್ಲ. ನಿಟ್ಟುಸಿರು ಹೊರಬಂದು ಹಸಿದ, ಬತ್ತಿದ ಬಾಡಿದ ತುಟಿಯ ಮೇಲೆ ಸುಡುತ್ತ ಬೀಸಿ ಹೋಯಿತು. ಮರಳು ಗಾಡಿನಲ್ಲಿ ಬೇಸಿಗೆಯಲ್ಲಿ ಬೀಸುವ ಬಿರುಗಾಳಿಯಂತೆ."೪

-ವೃಂದಾ ತಾನು ಹದಿಹರೆಯದಲ್ಲಿಯೇ ಪ್ರೇಮಿಸಿದ ಸನ್ಯಾಸಿ ಯುವಕನ ನೆನಪಿದು. ತಾನು ರೊಳ್ಳಿಯೊಂದಿಗೆ ವೈವಾಹಿಕ ಬದುಕನ್ನು ನಡೆಸುತ್ತಿದ್ದರೂ ಅವನ ನೆನಪು ಅವಳಿಗೆ ಮಾಸುವುದೇ ಇಲ್ಲ. ಸನ್ಯಾಸಿ ಯುವಕನ ಬಗೆಗಿರುವ ವೃಂದಾಳ ಪ್ರೇಮವು ಎಷ್ಟು ಆಳವಾದದ್ದು, ತೀವ್ರವಾದದ್ದು, ಭಾವನಾತ್ಮಕವಾದದ್ದು ಎಂಬುದು ಅವಳ ನೆನಪಿನಲ್ಲಿಯೇ ತಿಳಿಯುತ್ತದೆ. ವೃಂದಾ ಮೂರು ಮಕ್ಕಳ ತಾಯಿಯಾಗಿ, ಮೊಮ್ಮಕ್ಕಳನ್ನು ಪಡೆದರೂ ಅವಳ ಬದುಕಿನಲ್ಲಿ ಈ ನೆನಪು ಶಾಶ್ವತವಾಗಿ ನೆಲೆಯೂರಿದೆ. ರೊಳ್ಳಿಯೊಡನೆ ವೃಂದಾ ದೈಹಿಕ ಸಂಬಂಧ ಹೊಂದಿದಾಗಲೂ ಮಾನಸಿಕವಾಗಿ ಅ ಯುವಕನೊಡನೆ ಕೂಡಿದ ಅನುಭವ ಪಡೆಯುತ್ತಾಳೆ. ವೃಂದಾಳ ಈ ನಡವಳಿಕೆಗೆ ಏನು ಕಾರಣವಿರಬಹುದು? ವೃಂದಾಳ ಬಾಲ್ಯದಲ್ಲಿನ ಈಡೇರದ ಬಯಕೆಗಳೇ?, ರೊಳ್ಳಿಯು ತಕ್ಕ ಯೋಗ್ಯತೆಯ ಗಂಡನಲ್ಲವೇ? ತಾನು ನಿರೀಕ್ಷಿಸಿದ ವೈವಾಹಿಕ ಬದುಕಿನಲ್ಲಿಯ ತೃಪ್ತಿ ಅವಳಿಗೆ ದೊರೆತಿಲ್ಲವೇ? ಮುಂತಾದ ಪ್ರಶ್ನೆಗಳು ಸಹಜವಾಗಿಯೇ ಏಳುತ್ತವೆ.

ಬಾಲ್ಯಜೀವನಕ್ಕೆ ಕಾದಂಬರಿಗಳು ವಿಶೇಷ ಮಹತ್ವ ನೀಡಿವೆ. ಬಾಲ್ಯ ಮನುಷ್ಯನ ಜೀವನದಲ್ಲಿ ಅತ್ಯಂತ ಪ್ರಮುಖವಾದ ಘಟ್ಟ. ವ್ಯಕ್ತಿಯು ತಾನು ಇಲ್ಲಿ ಪಡೆಯುವ ಅನುಭವಗಳ ಹಿನ್ನೆಲೆಯಲ್ಲಿಯೇ ಆತನ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಇಲ್ಲಿ ಪಡೆದ ಅನುಭವಗಳು, ನೆನಪುಗಳು ಜೀವನದ ಕಡೆಯವರೆಗೂ ಬದುಕಿನಲ್ಲಿ ಮಾಸದೆ ಉಳಿಯುತ್ತವೆ. ಅದರಲ್ಲೂ ಪ್ರಥಮ ಪ್ರೇಮದ ನೆನಪುಗಳು ಜೀವನದ ಅಂತ್ಯದವರೆಗೂ ಅವನೊಂದಿಗಿರುತ್ತವೆ. ಎಂಬ ನಿಲುವುಗಳನ್ನು ಈ ಮೇಲ್ಕಂಡ ಕಾದಂಬರಿಗಳು ತಾಳಿವೆ.

ಮಾನಸಿಕ ಮತ್ತು ಬೌದ್ಧಿಕ ಅಂತರವೂ ಗಂಡು ಹೆಣ್ಣಿನ ಸಂಬಂಧದ ಮೇಲೆ ಪ್ರಭಾವ ಬೀರುತ್ತದೆ. ಮಾನಸಿಕವಾಗಿ ಗಂಡು-ಹೆಣ್ಣಿನ ನಡುವೆ ಹೊಂದಾಣಿಕೆಯ ಕೊರತೆಯು ಕಂಡುಬಂದರೆ, ಗಂಡು-ಹೆಣ್ಣಿನ ಸಂಬಂಧದಲ್ಲಿ ಅಂತರವುಂಟಾಗಿ ಬಿರುಕು ಉಂಟಾಗುತ್ತದೆ. ಇದಕ್ಕೆ ಪ್ರಮುಖವಾಗಿ ವ್ಯಕ್ತಿಯು ತನ್ನ ಜೀವನದಲ್ಲಿ ಪಡೆಯುವ ವೈಯಕ್ತಿಕ ಅನುಭವಗಳಲ್ಲಿನ ವ್ಯತ್ಯಾಸ, ವಿವಿಧ ಬಗೆಯ ದೃಷ್ಟಿಕೋನಗಳು, ವಿಭಿನ್ನ ಆಲೋಚನೆಗಳು ಮುಂತಾದವು ಕಾರಣವಾಗಿವೆ. ಗಂಡು-ಹೆಣ್ಣಿನ ಸಂಬಂಧದ ನಡುವೆ ವ್ಯಕ್ತಿವೈಶಿಷ್ಟತೆಯು ಪ್ರಭಾವ ಬೀರುತ್ತದೆ. ಇದರಿಂದ ಮಾನಸಿಕ ಅಂತರವುಂಟಾಗುತ್ತದೆ. ಮಾನಸಿಕ ಅಂತರ ಕಡಿಮೆ ಇದ್ದು ಹೊಂದಾಣಿಕೆ ಕಂಡುಬಂದಲ್ಲಿ, ದಾಂಪತ್ಯದ ನಡುವೆ ಅನೋನ್ಯತೆ ಕಂಡುಬರುತ್ತದೆ. ಬೌದ್ಧಿಕತೆಯಲ್ಲಿನ ಅಂತರವು ಗಂಡು-ಹೆಣ್ಣಿನ ಸಂಬಂಧದ ಮೇಲೆ ಪ್ರಭಾವ ಬೀರುತ್ತದೆ. ಬೌದ್ಧಿಕ ಅಂತರವು ಕಡಿಮೆಯಾದಂತೆ ದಾಂಪತ್ಯದಲ್ಲಿ ಸಾಮರಸ್ಯವು ಹೆಚ್ಚುತ್ತದೆ.

'ಮುಗಿಯದ ಕತೆ' ಕಾದಂಬರಿಯ ಕಥೆಯ ಆರಂಭದಲ್ಲಿ ಸರಸ್ವತಿ ಮತ್ತು ದೇಶಪಾಂಡೆಯರ ನಡುವಿನ ದಾಂಪತ್ಯದಲ್ಲಿ ಬಿರುಕಿರಲಿಲ್ಲ. ಇವರಿಬ್ಬರ ಮಾನಸಿಕ ಮತ್ತು ಬೌದ್ಧಿಕ ಮಟ್ಟದಲ್ಲಿ ಹೊಂದಾಣಿಕೆಯು ಕಂಡುಬರುತ್ತದೆ. ಆದರೆ ದೇಶಪಾಂಡೆಯು ಉನ್ನತ ವ್ಯಾಸಂಗ ಮಾಡಿ, ತರಗತಿಯಲ್ಲಿ ಯಶಸ್ವಿ ಶಿಕ್ಷಕನಾಗಿ ಪರಿವರ್ತನೆಯಾದ ಮೇಲೆ ಸರಸ್ವತಿ ಮತ್ತು ಅವನ ನಡುವೆ ಬೌದ್ಧಿಕ ಅಂತರವೇರ್ಪಡುತ್ತದೆ. ಇದರಿಂದ ದೇಶಪಾಂಡೆಯು ಸರಸ್ವತಿ ತನಗೆ ತಕ್ಕ ಹೆಂಡತಿಯಲ್ಲವೇನೋ ಎಂಬ ಮನೋಧೋರಣೆಯನ್ನು ಬೆಳೆಸಿಕೊಳ್ಳುತ್ತಾನೆ. ಮದುವೆಯ ವಿಷಯದಲ್ಲಿ, ತಾನು ದುಡಿಕಿದೆ ಎಂಬ ತೀರ್ಮಾನಕ್ಕೆ ಬರುತ್ತಾನೆ. ಇಲ್ಲಿ ಸರಸ್ವತಿ ಮತ್ತು ದೇಶಪಾಂಡೆಯರ ನಡುವೆ ಭಾವನಾತ್ಮಕ ಹೊಂದಾಣಿಕೆಯ ಕೊರತೆ ಇದೆ. ಇದಕ್ಕೆ ವ್ಯತಿರಿಕ್ತವಾಗಿ,

'ನಿರಿಂದ್ರಿಯ' ಕಾದಂಬರಿಯಲ್ಲಿ, ನಂದಾ ಮತ್ತು ವಿಜಯರ ಮಧ್ಯೆ ಭಾವನಾತ್ಮಕ ಹೊಂದಾಣಿಕೆ ಕಂಡುಬರುತ್ತದೆ. ವಿದ್ಯಾವಂತನಾದ ವಿಜಯ ಹೆಂಡತಿ ನಂದಾಳಿಗೂ ಅಕ್ಷರ ಕಲಿಸಿ ಅವಳ ಬೌದ್ಧಿಕತೆಯು ಮೇಲ್ಮಟ್ಟಕ್ಕೇರುವಂತೆ ಮಾಡುತ್ತಾನೆ. ಇದು ಅವರ ಮಧುರದಾಂಪತ್ಯ ಜೀವನಕ್ಕೆ ನಾಂದಿಯಾಗುತ್ತದೆ. ಅವರಿಬ್ಬರೂ ಸಾಮಾಜಿಕವಾಗಿ ತೊಡಗಿಸಿಕೊಳ್ಳುವುದು ಇದಕ್ಕೆ ಕಾರಣವಿರಬಹುದು. ಜೊತೆಗೆ ಕುಟುಂಬದಲ್ಲಿನ ತಂದೆ ಸರ್ವಾಧಿಕಾರಿಯಂತೆ ವರ್ತಿಸಿ ತನ್ನ ಇಚ್ಛಾನಿಷ್ಟಗಳನ್ನು ಹೆಂಡತಿಯ ಮೇಲೆ ಪ್ರಯೋಗಿಸುವ ಕಡೆ ಗಂಡು-ಹೆಣ್ಣಿನ ಸಂಬಂಧದಲ್ಲಿ ಸಾಮರಸ್ಯದ ಕೊರತೆಯು ಕಂಡುಬರುತ್ತದೆ. ಇಲ್ಲಿ ನಂದಾಳ ಮೇಲೆ ವಿಜಯ ಯಾವುದೇ ರೀತಿಯ ಬಲವಂತದ ಹೇರಿಕೆಯನ್ನು ಹೇರುವುದಿಲ್ಲ. ಮತ್ತು ಅವಳನ್ನು ನಿಯಂತ್ರಿಸುವುದಿಲ್ಲ. ಆದರೆ 'ನಾಲ್ಕನೆಯ ಆಯಾಮ'ದಲ್ಲಿ ಮನೋಜ್ ಕುಮಾರನ ತಂದೆ-ತಾಯಿಯನ್ನು, 'ನಿರಿಂದ್ರಿಯ'ದ ರೊಳ್ಳಿ ವೃಂದಾಳನ್ನು, 'ಪರಿಘ'ದ ಅಜೇಯನ ತಂದೆ-ತಾಯಿಯನ್ನು, ಅಜೇಯನು ತನ್ನ ಹೆಂಡತಿ ಪ್ರತಿಮಾಳಿಗೆ ಪ್ರತಿಯೊಂದು ಕಡೆಯಲ್ಲಿಯೂ ತಮ್ಮ ಅಭಿಪ್ರಾಯಗಳನ್ನು ಬಲವಂತವಾಗಿ ಹೇರುತ್ತಾರೆ. ಅವರನ್ನು

ನಿಯಂತ್ರಣದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಾರೆ. ಇದರಿಂದ ಇವರೆಲ್ಲರ ದಾಂಪತ್ಯದಲ್ಲಿ ಸಾಮರಸ್ಯದ ಕೊರತೆ ಕಂಡುಬರುತ್ತದೆ.

ಕುಸುಮಾಕರರ ಕಾದಂಬರಿಗಳಲ್ಲಿ ಒಂದೆಡೆ ಗಂಡು-ಹೆಣ್ಣಿನ ನಡುವೆ ಭಾವನಾತ್ಮಕ ಸಂಬಂಧವಿದ್ದರೆ, ಮತ್ತೊಂದೆಡೆ ಇವರ ನಡುವೆ ಭಾವನಾತ್ಮಕತೆಯ ಕೊರತೆ ಕಂಡುಬರುತ್ತದೆ. ಇನ್ನು ಕೆಲವು ಕಡೆ ಗಂಡ-ಹೆಂಡಿರಲ್ಲಿ ವ್ಯವಹಾರಿಕ ಪ್ರವೃತ್ತಿಯನ್ನು ಕಾಣಬಹುದು. 'ಪರಿಘ' ಕಾದಂಬರಿಯಲ್ಲಿ ಅಜೇಯನ ತಂದೆ-ತಾಯಿಯರ ನಡುವೆ ಈ ಬಗೆಯ ವ್ಯವಹಾರಿಕ ಸಂಬಂಧವನ್ನು ಕಾಣಬಹುದು. ಅಜೇಯನ ತಾಯಿಯು ಕುಟುಂಬದ ಬಗ್ಗೆ, ಮಗನ ಬಗ್ಗೆ ಸಂಪೂರ್ಣವಾಗಿ ಕಾಳಜಿವಹಿಸುತ್ತಾಳೆ. ಅವನ ತಂದೆಯು ಇದರ ಬಗ್ಗೆ ನಿರಾಸಕ್ತನಾಗಿರುತ್ತಾನೆ. ಹೆಂಡತಿ ಮತ್ತು ಮಗುವಿನ ಕ್ಷೇಮವನ್ನು ಎಲ್ಲಿಯೂ ಎಂದೂ ವಿಚಾರಿಸುವುದಿಲ್ಲ. ತನ್ನ ಕೈಹಿಡಿದ ಹೆಂಡತಿಯೊಡನೆ ಸರಸ ಸಲ್ಲಾಪದಲ್ಲಿ ತೊಡಗುವುದಿಲ್ಲ. ಭಾವನೆಗಳನ್ನು ಹಂಚಿಕೊಳ್ಳುವುದಿಲ್ಲ. ಇಲ್ಲಿ ಅಜೇಯನ ತಂದೆ-ತಾಯಿಯರ ನಡುವೆ ವ್ಯವಹಾರಿಕ ಸಂಬಂಧವು ಕೇವಲ ದೈಹಿಕ ಸಂಬಂಧಕ್ಕೆ ಸೀಮಿತವಾಗಿಯೇ ಉಳಿಯುತ್ತದೆ.



'ಪರಿಘ' ಕಾದಂಬರಿಯಲ್ಲಿ ಮತ್ತೊಂದು ರೀತಿಯಲ್ಲಿ ಗಂಡು-ಹೆಣ್ಣಿನ ಸಂಬಂಧವನ್ನು ಗುರುತಿಸಬಹುದು. ಅರವಿಂದನ ತಂದೆ ಗಿರಿಧರ ಮತ್ತು ತಾಯಿ ಶಕುಂತಲೆಯರ ನಡುವಿನ ಸಂಬಂಧ ಅಂಥದ್ದು. ಇವರೀರ್ವರ ನಡುವಿನ ದಾಂಪತ್ಯ ಜೀವನದಲ್ಲಿ ಸುಮಧುರ ಬಾಂಧವ್ಯವಿದೆ. ಇವರ ದಾಂಪತ್ಯದಲ್ಲಿ ಎಲ್ಲಿಯೂ ಬಿರುಕು ಉಂಟಾಗಿಲ್ಲ. ಆದರೂ ಗಿರಿಧರನು ಸ್ವಾತಂತ್ರ್ಯ ಚಳುವಳಿಯ ಕರೆಗೆ ಓಗೊಟ್ಟು ಕುಟುಂಬವನ್ನು ತೊರೆದು ಉದ್ದೇಶ ಸಾಧನೆಗಾಗಿ ಹೊರಟು ಹೋಗುತ್ತಾನೆ. ಈ ದಾಂಪತ್ಯದ ಬಿರುಕಿನ ನಡುವೆ ಆದರ್ಶವು ಪ್ರಾಧಾನ್ಯತೆ ಪಡೆದಿದೆ. ವ್ಯಕ್ತಿಯು ಯಾವುದ್ಹಾದರೂ ಸಾಮಾಜಿಕ ಧ್ಯೇಯೋದ್ದೇಶಕ್ಕಾಗಿ ಹೋರಾಡುವಾಗ ತನ್ನ ಸ್ವಂತ ಹಿತಾಸಕ್ತಿಯನ್ನು, ಕುಟುಂಬವನ್ನು, ತನ್ನ ವೈಯಕ್ತಿಕ ಸಂಬಂಧಗಳನ್ನು ಕಡೆಗಣಿಸಬೇಕಾಗುತ್ತದೆ. ಕಾದಂಬರಿಯ ಮೇಲೆ ಸ್ವಾತಂತ್ರ್ಯ ಚಳುವಳಿಯ ಪ್ರೇರಣೆಯನ್ನು ಇಲ್ಲಿ ಗುರುತಿಸಬಹುದು.



'ನಿರಿಂದ್ರಿಯ' ಕಾದಂಬರಿಯಲ್ಲಿ ಗಂಡು-ಹೆಣ್ಣಿನ ಸಂಬಂಧವು ಮತ್ತೊಂದು ಬಗೆಯಲ್ಲಿ ಬಂದಿದೆ. ಸಾಮಾನ್ಯವಾಗಿ ಗಂಡ-ಹೆಂಡತಿಯನ್ನು ನಿಯಂತ್ರಿಸುವ ಸನ್ನಿವೇಶಗಳು ಕುಸುಮಾಕರರ ಕಾದಂಬರಿಗಳಲ್ಲಿ ಸಾಕಷ್ಟು ಕಡೆ ಬಂದಿವೆ. ಆದರೆ 'ನಿರಿಂದ್ರಿಯ' ಕಾದಂಬರಿಯಲ್ಲಿ ರೊಳ್ಳಿಯ ಮಾವನನ್ನು ಅವನ ಅತ್ತೆಯೇ ನಿಯಂತ್ರಣದಲ್ಲಿಟ್ಟುಕೊಂಡಿದ್ದಾಳೆ. ಇವರಿಬ್ಬರ ನಡುವೆ ಅನೋನ್ಯ ಸಂಬಂಧಕ್ಕೆ ಕೊರತೆಯಿಲ್ಲದಿದ್ದರೂ ರೊಳ್ಳಿಯ ಮಾವನು ಅವಳ ನಿಯಂತ್ರಣಕ್ಕೆ ಒಳಗಾಗಿದ್ದಾನೆ. ತನ್ನ ಕುಟುಂಬದ ಬಗ್ಗೆ ಮಾತ್ರ ಚಿಂತಿಸುವ ಸೀಮಿತ ಆಲೋಚನೆ, ಕುಟುಂಬದಲ್ಲಿ ಆಕೆಯ ನಿರ್ವಹಿಸುವ ಜವಾಬ್ದಾರಿ, ಅವಳನ್ನು ಕುಟುಂಬದಲ್ಲಿ ಪ್ರಧಾನವನ್ನಾಗಿ ಮಾಡುತ್ತದೆ. ಎಲ್ಲಾ ರೀತಿಯಿಂದಲೂ ಆಕೆ ತನ್ನ ಗಂಡನನ್ನು ನಿಯಂತ್ರಣದಲ್ಲಿಟ್ಟುಕೊಂಡಿದ್ದಾಳೆ.

ಕುಸುಮಾಕರರ ಕಾದಂಬರಿಗಳಲ್ಲಿ ಕಾಮವು ಪ್ರಧಾನವಾಗಿ ಚಿತ್ರಿತವಾಗಿದೆ. ಕಾಮವು ಮನುಷ್ಯನ ಬದುಕನ್ನು ನಿಯಂತ್ರಿಸುವ, ರೂಪಿಸುವ, ಮುನ್ನಡೆಸುವ ಅಂಶಗಳಲ್ಲಿ ಒಂದಾಗಿದೆ. ಕಾದಂಬರಿಗಳಲ್ಲಿನ

ಹಲವಾರು ವ್ಯಕ್ತಿಗಳ ವ್ಯಕ್ತಿತ್ವವನ್ನು ರೂಪಿಸುವುದರಲ್ಲಿ, ಕಾಮವು ನಿರ್ಣಾಯಕ ಪಾತ್ರವನ್ನು ವಹಿಸಿದೆ. ಮನುಷ್ಯನಿಗೆ ಕಾಮವು ನೈಸರ್ಗಿಕವಾದದ್ದು. ಇದು ಅವನನ್ನು ಹಲವಾರು ಚಟುವಟಿಕೆಗಳನ್ನು ಕೈಗೊಳ್ಳುವಂತೆ ಪ್ರೇರಣೆ ನೀಡುತ್ತದೆ. ಇದಕ್ಕೆ ಎಲ್ಲಾ ಕಾದಂಬರಿಗಳಲ್ಲಿಯೂ ಆದ್ಯತೆ ನೀಡಲಾಗಿದೆ. 'ಮುಗಿಯದ ಕತೆ'ಯಲ್ಲಿನ ಸರಸ್ವತಿ ಮತ್ತು ದೇಶಪಾಂಡೆಯರ ಮಧ್ಯೆ ದಾಂಪತ್ಯವು ಮುರಿದುಬೀಳುವ ಸ್ಥಿತಿಯಲ್ಲಿಯೂ ಅವರಿಬ್ಬರೂ ದೈಹಿಕ ಸಮಾಗಮವನ್ನು ಹೊಂದುತ್ತಾರೆ. ಇದು ಕಾಮದ ತೀವ್ರತೆ ಎಷ್ಟು? ಎಂಬುದರ ಅರಿವನ್ನು ಓದುಗರಿಗೆ ಉಂಟು ಮಾಡುತ್ತದೆ. ದೇಶಪಾಂಡೆ ಶೈಲಜಾಳಿಂದ ಆಕರ್ಷಿತನಾಗುವುದು, ಸರಸ್ವತಿ ದೇಸಾಯಿಯಲ್ಲಿ ಹೊಸ ಸ್ನೇಹ ಬೆಳೆಸುವುದು, ಈ ಎಲ್ಲಾ ಕಡೆಗಳಲ್ಲಿಯೂ ಕಾಮದ ಪ್ರಭಾವವಿದೆ. ಸರಸ್ವತಿಯ ಸೌಂದರ್ಯ ಪ್ರಜ್ಞೆಯ ಹಿಂದೆ ಕಾಮದ ಪ್ರಭಾವವನ್ನು ನಾವು ಗುರುತಿಸಬಹುದು. ಕುಸುಮಾಕರರ ಕಾದಂಬರಿಗಳಲ್ಲಿ ಕಾಮದ ತೀವ್ರತೆಯು ಹೆಚ್ಚಾಗಿ ಕಂಡುಬರುವುದು 'ನಾಲ್ಕನೆಯ ಆಯಾಮ'ದಲ್ಲಿ.

ಇದರಲ್ಲಿ ಮನೋಜ್‌ಕುಮಾರನ ವ್ಯಕ್ತಿತ್ವದ ಹಿಂದೆ ಕಾಮದ ಪ್ರಭಾವವಿದೆ. ಕಾಮವು ವ್ಯಕ್ತಿಯ ವ್ಯಕ್ತಿತ್ವದ ವಿಕಾಸಕ್ಕೆ ಪೂರಕವಾದರೂ ಆಗಬಹುದು. ಮಾರಕವಾಗಲೂ ಬಹುದು ಎಂಬ ಅಂಶ ಇಲ್ಲಿ ಮನದಟ್ಟಾಗುತ್ತದೆ. ಇವನ ಪ್ರತಿಯೊಂದು ನಡವಳಿಕೆಯ ಹಿಂದೆಯೂ ಈಡೇರದ ಅತೃಪ್ತ ಕಾಮನೆಗಳ ಪ್ರಭಾವವಿದೆ. ಮನೋಜ್ ಕುಮಾರನ ಪ್ರತಿಯೊಂದು ಚಟುವಟಿಕೆಯು ಕಾಮದಿಂದ ನಿಯಂತ್ರಿಸಲ್ಪಡುತ್ತಿದೆ. ಕಾಲೇಜಿನಲ್ಲಿ ಹುಡುಗಿಯರನ್ನು ಕಿಚಾಯಿಸುವುದು, ಗುಂಪಿನಲ್ಲಿ ಸೇರಿ ಅಶ್ಲೀಲ ಹರಟೆಗಳನ್ನು ಕೊಚ್ಚುವುದು, ಅಶ್ಲೀಲ ಪುಸ್ತಕಗಳನ್ನು ಓದುವುದು, ಮನೆಯೊಡೆಯರ ಹುಡುಗಿಗೆ ಪ್ರೇಮ ಪತ್ರಬರೆಯುವುದು. ಸಿನಿಮಾಗಳನ್ನು ನೋಡುವುದು ಮುಂತಾದ ಅವನ ಎಲ್ಲಾ ಚಟುವಟಿಕೆಗಳ ಹಿಂದೆಯೂ ಈಡೇರದ ಕಾಮದ ಪ್ರಭಾವವಿದೆ. ಇದರಿಂದ ಅವನ ಮನಸ್ಸು ವಿಕೃತಿಯನ್ನು ಹೊಂದುವ ಹಂತಕ್ಕೂ ಹೋಗುತ್ತದೆ. ಶೌಚಾಲಯದ ಗೋಡೆಗಳ ಮೇಲೆ ಅಶ್ಲೀಲ ಬರಹಗಳು, ನಗ್ನ ಚಿತ್ರಗಳನ್ನು ಬಿಡಿಸುತ್ತಾನೆ. ಇವನಿದ್ದ ಗುಂಪಿನ ನಾಯಕನ ಪ್ರೇಯಸಿಯ ಹೆಸರನ್ನು ತನ್ನ ಹೆಸರಿನೊಡನೆ ಫಿಶ್‌ಪಾಂಡ್‌ನಲ್ಲಿ ಸೇರಿಸಿ ಅವನಿಂದ ಒದೆಯನ್ನು ತಿನ್ನುತ್ತಾನೆ. ಇವೆಲ್ಲದರಿಂದಲೂ ಅವನ ಬಯಕೆಯು ಈಡೇರದಾದಾಗ ವೇಶ್ಯೆಯ ಸಹವಾಸವನ್ನು ಮಾಡುತ್ತಾನೆ. ಇಲ್ಲಿ ಮನೋಜ್ ಕುಮಾರನ ಇಡೀ ಬದುಕನ್ನೇ ಕಾಮವು ನಿಯಂತ್ರಿಸಿದೆ. ಅವನ ದಿನನಿತ್ಯದ ಚಟುವಟಿಕೆಯ ಹಿಂದೆ ಅದರ ಪ್ರೇರಣೆಯಿದೆ.

ಕಥಾನಾಯಕನ ವ್ಯಕ್ತಿತ್ವದ ನಿರ್ಮಾಣದಲ್ಲಿ ಕಾಮವು ಧನಾತ್ಮಕ ಪ್ರಭಾವವನ್ನು ಬೀರದೆ ಋಣಾತ್ಮಕ ಪ್ರಭಾವವನ್ನು ಬೀರಿದೆ. ಅವನ ವ್ಯಕ್ತಿತ್ವವು ಅಧೋಗತಿಯನ್ನು ತಲುಪಲು ಕಾಮವೇ ಪ್ರಮುಖಕಾರಣವಾಗಿದೆ. ಕಾಮವು ತುಂಬಾ ಚೈತನ್ಯಯುತವಾದುದು. ಅದು ವ್ಯಕ್ತಿಯ ವ್ಯಕ್ತಿತ್ವವನ್ನು ಧನಾತ್ಮಕವಾಗಿಯಾದರೂ, ಋಣಾತ್ಮಕವಾಗಿಯಾದರೂ ರೂಪಿಸುವ ಸಾಧ್ಯತೆಯಿದೆ. ವ್ಯಕ್ತಿಯಲ್ಲಿ ಕಾಮವು ಕಾಮವಾಗಿಯೇ ಉಳಿದರೆ, ದೈಹಿಕ ಸಂಬಂಧಕ್ಕೆ ಮಾತ್ರ ಸೀಮಿತಗೊಂಡರೆ ವ್ಯಕ್ತಿತ್ವ ವಿಕಾಸಕ್ಕೆ ಇದು ಮಾರಕವಾಗುತ್ತದೆ. ವೇಶ್ಯಾಸಂಗದಿಂದ ದೈಹಿಕ ತೃಪ್ತಿಯನ್ನು ಪಡೆದ ಮನೋಜ್‌ಕುಮಾರ್‌ನನ್ನು ಪಾಪಪ್ರಜ್ಞೆ ಕಾಡುತ್ತದೆ. ಅಲ್ಲಿಂದ ಕಾಮಕ್ಕೂ ಮೇಲ್ಮಟ್ಟ ಪ್ರೇಮಕ್ಕಾಗಿ ಅವನ ಮನಸ್ಸು ತುಡಿಯುತ್ತದೆ. ಪುನಃ ಅಲ್ಲಿಂದ ಅವನ ವ್ಯಕ್ತಿತ್ವವು ಸಕಾರತ್ಮಕವಾಗಿ

ಅಭಿವೃದ್ಧಿ ಹೊಂದಲಾರಂಭಿಸುತ್ತದೆ. ವ್ಯಕ್ತಿಯ ವ್ಯಕ್ತಿತ್ವವು ಕಾಮದಿಂದ ಪರಿಪೂರ್ಣವಾಗಿ ನಿಯಂತ್ರಿಸಲ್ಪಡುತ್ತದೆ ಎಂಬ ಧೋರಣೆ ಕಾದಂಬರಿಯಲ್ಲಿದೆ. ಇಲ್ಲಿ ಆಧುನಿಕ ಮನಃಶಾಸ್ತ್ರೀಯ ಸಿದ್ಧಾಂತಗಳ ಪ್ರಭಾವವು ಕಾದಂಬರಿಯ ಮೇಲಾಗಿದೆ.

'ಬಯಲು-ಬಸಿರು' ಕಾದಂಬರಿಯಲ್ಲಿಯ ಕಸಿನ್ಸ್ ಕಾಮದಿಂದಲೇ ಅಲೌಕಿಕ ಸುಖವನ್ನು ಪಡೆಯುವ ಉದ್ದೇಶದಿಂದ ಹೆಂಡತಿಗೆ ವಿಚ್ಛೇದನ ನೀಡಿ, ತಾಂತ್ರಿಕ ಕಾಮ ಕೇಳಿಯ ಪ್ರಭಾವಕ್ಕೊಳಗಾಗಿ ಕುಟುಂಬವನ್ನು ತ್ಯಜಿಸಿ ಹೋಗುತ್ತಾನೆ. ಬೇರೊಂದು ಹೆಣ್ಣಿನ ಸಂಗವನ್ನು ಮಾಡುತ್ತಾನೆ. ಕಾದಂಬರಿಗಳಲ್ಲಿ ವ್ಯಕ್ತಿಯ ವ್ಯಕ್ತಿತ್ವದ ಮೇಲೆ ಕಾಮದ ಪ್ರಭಾವವನ್ನು ಚಿತ್ರಿಸಿದರೂ ಕೂಡ ಅದರಿಂದಾಚೆಗೆ ಅವರ ಆಲೋಚನೆಯಿದೆ. 'ನಿರಿಂದ್ರಿಯ' ಕಾದಂಬರಿಯಲ್ಲಿ ರೊಳ್ಳಿಯ ಯಾಂತ್ರಿಕವಾದ ರೀತಿಯಲ್ಲಿ ತನ್ನ ಹೆಂಡತಿಯೊಡನೆ ದೈಹಿಕ ಸಂಬಂಧ ಹೊಂದುತ್ತಾನೆ. ಪಶುವಿನಂತೆ ಆಕೆಯ ಮೇಲೆ ಆಕ್ರಮಣ ಮಾಡುತ್ತಾನೆ. ಅದನ್ನು ಕಾದಂಬರಿಯು ಈ ರೀತಿಯಲ್ಲಿ ನಿರೂಪಿಸುತ್ತದೆ.

> "ಮಂದವಾದ ಇರುಳು ದೀಪದ ಬೆಳಕಿನಲ್ಲಿ ರೊಳ್ಳಿ ತನ್ನ ಹೆಂಡತಿಯನ್ನು ನೋಡಿದ. ನಿರಾಸೆ, ಕೋಪ, ಜಿಗುಪ್ಸೆ ಎಲ್ಲಾ ಒಟ್ಟಾಗಿ ಅವನ ಮನಸ್ಸನ್ನು ಆಕ್ರಮಿಸಿದವು. ಆ ಪುಸ್ತಕದ ಮೇಲಿನ ಚೆಲುವೆಯ ಚಿತ್ರ ನೆನಪಿಗೆ ಬಂತು. ಕೆಳಗೆ ಬರೆದ ವಾಕ್ಯ ನೆನಪಾಯಿತು. ಮುಖವನ್ನು ನೋಡಿದ, ಅಸಹ್ಯವೆನಿಸಿತು. ಕ್ರೂರವಾಗಿ ಆ ದೇಹವನ್ನು ಅಂಗಾಂಗಗಳನ್ನು ಗಾಸಿಗೊಳಿಸಿದ. ಎಲ್ಲೋ ಲೋಕದಲ್ಲಿ ವಿಹರಿಸುತ್ತಿರುವ ಜೀವ ಮರಳಿ ಬಂತು. ಹಾ! ಎಂದು ನರಳಿತು. ಅವನನ್ನು ಮೆಟ್ಟಿದ ಭೂತ ದೂರ ಸರಿದಿತ್ತು. ನೋವಿನಿಂದ ದೇಹ ಸಣ್ಣಾಗಿ ನರಳಿತು."[೫]

-ಇಲ್ಲಿ ಕಾಮದಿಂದ ಪ್ರೇರಿತವಾದ ರೊಳ್ಳಿಯ ಮನಸ್ಸಿನ ಪ್ರಕ್ಷುಬ್ಧ ಸ್ಥಿತಿಯನ್ನು, ಅವನ ಕೃತ್ಯವನ್ನು ಕಾದಂಬರಿಯು ಚಿತ್ರಿಸಿದೆ. ಕಾಮದ ಕ್ರೌರ್ಯದ ಬಗ್ಗೆ, ಭಾವನೆಗಳಿಲ್ಲದ ಯಾಂತ್ರಿಕ ದೈಹಿಕಸಂಬಂಧದ ಬಗ್ಗೆ ಕಾದಂಬರಿಯ ನಿರೂಪಣೆಯಲ್ಲಿ ಅಸಹನೆಯಿದೆ. ಆದ್ದರಿಂದಲೇ ಇರಬಹುದು ಎಲ್ಲಾ ಕಾದಂಬರಿಗಳಲ್ಲಿಯೂ ಕಾಮದಿಂದಾಚೆಗಿನ ಮಾನಸಿಕ ತೃಪ್ತಿಗಾಗಿ ಅನ್ವೇಷಣೆ ನಡೆದಿದೆ. ಎಲ್ಲಾ ಕಾದಂಬರಿಗಳಲ್ಲಿಯೂ ಕಾಮದ ಪ್ರಭಾವ-ಪ್ರೇರಣೆಯನ್ನು ಚಿತ್ರಿಸಿದರೂ, ಬದುಕಿನಲ್ಲಿ ಅದೇ ಪ್ರಧಾನವಲ್ಲ. ಪ್ರೇಮದ ಅಡಿಯಾಳಾಗಿ ಕಾಮವು ಬರಬೇಕು ಎಂಬ ನಿಲುವು ಮೂಡಿಬಂದಿದೆ.

ನವ್ಯ ಸಾಹಿತಿಗಳು ಸ್ತ್ರೀಯರ ಮನೋಭಾವಗಳನ್ನು ಸಾಹಿತ್ಯದಲ್ಲಿ ಚಿತ್ರಿಸುವಲ್ಲಿ ಸೋತಿದ್ದಾರೆ ಎಂಬ ಅಭಿಪ್ರಾಯ ವಿಮರ್ಶಕರಲ್ಲಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಯು.ಆರ್.ಅನಂತಮೂರ್ತಿಯವರ ಕಾದಂಬರಿಗಳು ಟೀಕೆಗೊಳಗಾಗಿವೆ. ಆದರೆ ಕುಸುಮಾಕರರು ನವ್ಯದ ಸಾಹಿತಿಯಾದರೂ ಸಹ ಇದಕ್ಕೆ ಸಂಬಂಧಿಸಿದಂತೆ ತಮ್ಮದೇ ಆ ವೈಶಿಷ್ಟ್ಯವನ್ನು ಸಾಧಿಸಿದ್ದಾರೆ. 'ನಾಲ್ಕನೆಯ ಆಯಾಮ' ಮತ್ತು 'ಬಯಲು-ಬಸಿರು' ಕಾದಂಬರಿಗಳನ್ನು ಹೊರತು ಪಡಿಸಿ ಉಳಿದೆಲ್ಲಾ ಕಾದಂಬರಿಗಳಲ್ಲೂ ಸ್ತ್ರೀ ಪಾತ್ರಗಳು ವಿಶೇಷ

ಮಹತ್ವ ಪಡೆದಿವೆ. ಹಲವು ಕಡೆ ಸ್ತ್ರೀಪಾತ್ರಗಳು ಉದಾತ್ತೀಕರಣಗೊಂಡಿವೆ. ಸ್ತ್ರೀಯರ ಭಾವನೆಗಳು, ಅವರ ಅಂತರಂಗದ ತುಡಿತಗಳು, ಅವರ ಮಾನಸಿಕ ಸ್ಥಿತಿಯನ್ನು ಚಿತ್ರಿಸುವಲ್ಲಿ ಕುಸುಮಾಕರರು ಉಳಿದ ನವ್ಯದ ಬರಹಗಾರರಿಗೆ ಹೋಲಿಸಿದಲ್ಲಿ ಯಶಸ್ವಿಯಾಗಿದ್ದಾರೆ ಎಂದು ಹೇಳಬಹುದು. 'ಮುಗಿಯದ ಕತೆ'ಯಲ್ಲಿನ ಸರಸ್ವತಿ, ದೇಶಪಾಂಡೆಯೊಡನೆ ಭಾವನಾತ್ಮಕ ಸಂಬಂಧಕ್ಕಾಗಿ ಹಾತೊರೆಯುತ್ತಾಳೆ. ದೈವದ ಹೆಸರಿನಲ್ಲಿ ಮಾನಸಿಕ ದುರ್ಬಲನಾಗಿದ್ದ ಅವನಲ್ಲಿ ಆತ್ಮವಿಶ್ವಾಸ ತುಂಬುತ್ತಾಳೆ. ಕಾಮದಿಂದ ಹೊರತಾದ ಪ್ರೇಮವನ್ನು ಬಯಸಿ, ಆತನಲ್ಲಿ ಸಾಕಷ್ಟು ಪರಿವರ್ತನೆಯನ್ನು ತರುತ್ತಾಳೆ. ಗಂಡನ ಅಭ್ಯುದಯಕ್ಕಾಗಿ ಯೋಜನೆಗಳನ್ನು ರೂಪಿಸುವ ದಿಟ್ಟೆ ಈಕೆ. ಗಂಡನಿಗೆ ಮಾನಸಿಕ ಪ್ರೇರಣೆಯನ್ನು ನೀಡುತ್ತಾಳೆ. ಹಾಗೆಯೇ 'ನಿರಿಂದ್ರಿಯ'ದ ವೃಂದಾ, ರೊಳ್ಳಿಯ ಮಾನಸಿಕ ಏರಿಳಿತಗಳಿಗೆ ನಾನೇ ಕಾರಣಳೆಂದು ಪಶ್ಚಾತ್ತಾಪ ಪಡುತ್ತಾಳೆ. ತಾನು ಹಳ್ಳಿಯಲ್ಲಿ ಹುಡುಗಿಯಾಗಿದ್ದಾಗ ಅವಳ ಭಾವನೆಗಳಿಗೆ ಯಾರೂ ಸ್ಪಂದಿಸದಿದ್ದರೂ ಗಡಗಡ ಗಂಗೆಯೊಂದಿಗೆ ತನ್ನ ಭಾವನೆಗಳನ್ನು ಹಂಚಿಕೊಳ್ಳುತ್ತಾಳೆ. ತಂಗಿಯ ಮನೆಗೆ ಹೋಗಿದ್ದಾಗ ಉಡುಗೊರೆ ಬಸ್ಸಿನಲ್ಲಿ ಕಳುವಾಯಿತೆಂದು ಆತ್ಮಸಾಕ್ಷಿಗೆ ವಿರುದ್ಧವಾಗಿ ಸುಳ್ಳು ಹೇಳಿದ್ದ ಈಕೆ ತಂಗಿಯೆದುರು ನಿಜ ಹೇಳಿ ತನ್ನ ಔದಾರ್ಯ ವ್ಯಕ್ತಿತ್ವ ಪ್ರದರ್ಶಿಸುತ್ತಾಳೆ. ಮನಸ್ಸಿನ ದುರ್ಬಲತೆಯಿಂದ ರೊಳ್ಳಿ ಹಾಸಿಗೆ ಹಿಡಿದಾಗ ಅವನಿಗೆ ಮಾತೃವಾತ್ಸಲ್ಯ ತೋರಿಸುತ್ತಾಳೆ. ಈ ಕಾದಂಬರಿಯ ಕೇಂದ್ರ ಪಾತ್ರ ರೊಳ್ಳಿಯಾದರೂ ಅಷ್ಟೇ ಸ್ಥಾನಮಾನವನ್ನು ವೃಂದಾಳಿಗೂ ಕಾದಂಬರಿಯು ನೀಡಿದೆ.

ಇಷ್ಟಲ್ಲದೆ 'ಪರಿಘ' ಕಾದಂಬರಿಯಲ್ಲಿ ಗಿರಿಧರನ ಅನುಪಸ್ಥಿತಿಯಲ್ಲಿಯೂ ಅರವಿಂದನನ್ನು ದಿಟ್ಟತನದಿಂದ ಸಾಕಿ ಅವರಿವರ ಮನೆಯಲ್ಲಿ ಕೆಲಸ ಮಾಡಿ ಮಗನಿಗೆ ವಿದ್ಯಾಭ್ಯಾಸ ಕೊಡಿಸಿದ ಶಕುಂತಲೆ, ತಂದೆಯ ನಿರಾಸಕ್ತಿಯ ನಡುವೆಯೂ ಮಗನಿಗೆ ಪ್ರೀತಿಯ ಕೊರತೆಯು ಬಾರದಂತೆ ನೋಡಿಕೊಂಡ ಅಜೇಯನ ತಾಯಿ, ಲೌಕಿಕ, ವ್ಯಾವಹಾರಿಕ ಜಗತ್ತಿನ ಪರಿಚಯವಿಲ್ಲದ, ಅನಕ್ಷರಸ್ಥ ಸ್ತ್ರೀಯಾದರೂ, ಅಜೇಯನ ಭಾವನೆಗಳ ಏರಿಳಿತಗಳನ್ನು ಕಂಡು ಮರುಗುವ ಅಜೇಯನ ಹೆಂಡತಿ ಪ್ರತಿಮಾ, ವಿವಾಹ ವಿಚ್ಛೇದನದ ನಡುವೆಯೂ ಮಗನನ್ನು ಸಾಕಿ ಅವನ ಬದುಕಿಗೆ ಒಂದು ಮಾರ್ಗ ತೋರಿಸಿದ ಜೆಸ್ಸಿ ಇವೆಲ್ಲವೂ ಕುಸುಮಾಕರರ ಕಾದಂಬರಿಗಳಲ್ಲಿ ಜೀವಂತ ಪಾತ್ರಗಳಾಗಿ ಚಿತ್ರಿತವಾಗಿವೆ. ಯು.ಆರ್ .ಅನಂತಮೂರ್ತಿಯವರ 'ಸಂಸ್ಕಾರ' ಕಾದಂಬರಿಯ ಚಂದ್ರಿಯ ಪಾತ್ರಕ್ಕೂ ಕುಸುಮಾಕರರ 'ನಿರಿಂದ್ರಿಯ' ಕಾದಂಬರಿಯ ವೃಂದಾಳ ಪಾತ್ರಕ್ಕೂ ಸಾಕಷ್ಟು ಅಂತರವಿದೆ. 'ಸಂಸ್ಕಾರ'ದಲ್ಲಿನ ಚಂದ್ರಿ-ಪ್ರಾಣೇಶಾಚಾರ್ಯರ ಸಮಾಗಮದ ನಂತರ ಪ್ರಾಣೇ ಶಾಚಾರ್ಯರ ವ್ಯಕ್ತಿತ್ವದಲ್ಲಾದ ಮಾರ್ಪಾಡುಗಳನ್ನು 'ಸಂಸ್ಕಾರ' ಚಿತ್ರಿಸಿದರೂ, ಚಂದ್ರಿಯ ಮಾನಸಿಕ ಸ್ಥಿತಿಯನ್ನು ಕಟ್ಟಿಕೊಡುವಲ್ಲಿ ನಿರಾಸಕ್ತಿ ತಾಳುತ್ತೆ. ಆದರೆ, ಕುಸುಮಾಕರರ ವೃಂದಾಳು 'ನಿರಿಂದ್ರಿಯ' ಕಾದಂಬರಿಯಲ್ಲಿ ರೊಳ್ಳಿಗೆ ಸರಿಸಮನಾಗಿ, ಕೆಲವು ಕಡೆ ರೊಳ್ಳಿಗಿಂತಲೂ ಹೆಚ್ಚಿನ ಆದ್ಯತೆಯನ್ನು ಪಡೆಯುತ್ತಾಳೆ. ವೃಂದಾಳ ಮಾನಸಿಕ ಸ್ಥಿತಿಯನ್ನು ಯಶಸ್ವಿಯಾಗಿ ಕುಸುಮಾಕರರು ಚಿತ್ರಿಸಿದ್ದಾರೆ. ಅಲ್ಲದೆ ಈ ಮೇಲೆ ನೋಡಿದ ಸ್ತ್ರೀ ಸಮುದಾಯವೇ ಕುಸುಮಾಕರರ ಕಾದಂಬರಿಗಳಲ್ಲಿ ಪ್ರಾಮುಖ್ಯತೆ ಪಡೆದಿದೆ. ಪುರುಷ

ಪ್ರಧಾನವಾಗಿರುವ ಕಾದಂಬರಿಗಳನ್ನು ಕುಸುಮಾಕರರು ರಚಿಸಿದರೂ, ಸ್ತ್ರೀಪಾತ್ರಗಳನ್ನು ಕಡೆಗಣಿಸಿಲ್ಲ. ಪುರುಷ ಪಾತ್ರಗಳಷ್ಟೇ ಪ್ರಾಮುಖ್ಯತೆಯನ್ನು ಕೆಲವು ಕಡೆ ಸ್ತ್ರೀ ಪಾತ್ರಗಳು ಪಡೆದುಕೊಂಡಿವೆ. ಈ ದೃಷ್ಟಿಯಿಂದ ಕುಸುಮಾಕರರು ನವ್ಯ ಸಾಹಿತಿಗಳಲ್ಲಿ ಸ್ತ್ರೀ ಸಂವೇದನೆಗಳನ್ನು ಕಟ್ಟಿಕೊಡುವಲ್ಲಿ ಶಾಂತಿನಾಥ ದೇಸಾಯಿಯವರ ಮಟ್ಟಕ್ಕೇರದಿದ್ದರೂ, ನಂತರದ ಸ್ಥಾನ ಅವರದ್ದು ಎಂದು ಹೇಳಬಹುದು.

**ಟಿಪ್ಪಣಿಗಳು**

೧. **ಕುಸುಮಾಕರ ದೇವರಗೆಣ್ಣೂರು, 'ಮುಗಿಯದ ಕತೆ',** ಪು.೭೪

೨. ಅದೇ, **'ನಿರಿಂದ್ರಿಯ',** ಪು.೧೮೨

೩. ಅದೇ, **'ಪರಿಘು'** ಪು.೧೮೦

೪. ಅದೇ, **'ನಿರಿಂದ್ರಿಯ',** ಪು.೭೭

೫. ಅದೇ, ಪು.೧೭೫

೫

# ಕುಸುಮಾಕರರ ಕಾದಂಬರಿಗಳಲ್ಲಿ ದಾರ್ಶನಿಕತೆಯ ಸ್ವರೂಪ

## ದಾರ್ಶನಿಕತೆಯ ಅರ್ಥ

'ದರ್ಶನ'ವೆಂಬ ಪದದ ಅರ್ಥ 'ನೋಟ' 'ದೃಷ್ಟಿ' ಎಂದಾಗುತ್ತದೆ. ವ್ಯಕ್ತಿಯೊಬ್ಬ ಕಂಡುಕೊಳ್ಳುವ ಸತ್ಯ ಎಂದು ಹೇಳಬಹುದು. 'ದಾರ್ಶನಿಕತೆ'ಯು ದರ್ಶನದ ವಿಸ್ತೃತ ರೂಪ. ಪ್ರತಿನಿತ್ಯ ಮನುಷ್ಯನು ತನ್ನನ್ನು ಒಂದಲ್ಲ ಒಂದು ರೀತಿಯ ಅನುಭವಗಳಿಗೆ ಒಡ್ಡಿಕೊಳ್ಳುತ್ತಾನೆ. ಇದರಿಂದ ಅವನ ಅನುಭವದ ಕ್ಷಿತಿಜವು ವಿಸ್ತಾರವಾಗುತ್ತದೆ. ಅಂತೆಯೇ ಅವನ ದೃಷ್ಟಿಕೋನದಲ್ಲಿಯೂ ಬದಲಾವಣೆಗಳಾಗುತ್ತವೆ. ದಾರ್ಶನಿಕತೆಯೆಂದರೆ ವ್ಯಕ್ತಿಯ ಜೀವನ ದೃಷ್ಟಿಕೋನ, ಅಥವಾ ಲೋಕದೃಷ್ಟಿಯೆಂದು ಹೇಳಬಹುದು. ಇದು ಮಾನವನ ಜೀವನದ ಲೋಕಕ್ಕೆ ಸಂಬಂಧಿಸಿದ ಮೂಲಭೂತ ಸತ್ಯ. ಆ ಸತ್ಯಗಳನ್ನು ಕಂಡು ಹಿಡಿಯಲು ನಿರಂತರವಾಗಿ ಹುಡುಕಾಡುವ ವ್ಯಕ್ತಿ 'ದಾರ್ಶನಿಕ'ನೆನಿಸಿಕೊಳ್ಳುತ್ತಾನೆ. ಬದುಕಿನಲ್ಲಿನ ಮೂಲಭೂತ ಸತ್ಯಗಳನ್ನು ಕಂಡುಹಿಡಿಯಲು ವ್ಯಕ್ತಿಯು ನಡೆಸುವ ಒಂದು ತಾತ್ವಿಕ ಅನ್ವೇಷಣೆಯನ್ನು 'ದಾರ್ಶನಿಕತೆ' ಎಂದು ಕರೆಯಬಹುದು. ದಾರ್ಶನಿಕತೆಯು ಮನುಷ್ಯನ ಮನಸ್ಸಿಗೆ ಸಂಬಂಧಿಸಿದ ಅಮೂರ್ತ ಕ್ರಿಯೆ. ಇದರಲ್ಲಿ ಚಿಂತನೆಯು ಹೆಚ್ಚು ಪ್ರಾಮುಖ್ಯತೆ ಪಡೆದುಕೊಳ್ಳುತ್ತದೆ.

ಈ ದೃಷ್ಟಿಯಿಂದ ಸಾಹಿತಿಯನ್ನು ಒಬ್ಬ ದಾರ್ಶನಿಕನೆಂದು ಹೇಳಬಹುದು. ತನ್ನ ಕೃತಿಗಳಲ್ಲಿ ಹೊಸ ಬಗೆಯ ದರ್ಶನಗಳಿಗಾಗಿ ಆತ ಹುಡುಕಾಟ ನಡೆಸುತ್ತಾನೆ. ವಿವಿಧ ಬಗೆಯ ದರ್ಶನಗಳನ್ನು ಓದುಗಲೋಕಕ್ಕೆ ಸಾಧ್ಯವಾದ ಕಡೆ ನೀಡುತ್ತಿರುತ್ತಾನೆ.

ಕುಸುಮಾಕರ ದೇವರಗೆಣ್ಣೂರರವರು ಕೂಡ ಒಬ್ಬ ದಾರ್ಶನಿಕ ಲೇಖಕ. ಇವರ ಎಲ್ಲಾ ಕಾದಂಬರಿಗಳಲ್ಲಿ ಒಂದಲ್ಲ ಒಂದು ರೀತಿಯ ಹುಡುಕಾಟಗಳನ್ನು ಕಾಣಬಹುದು. ವ್ಯಕ್ತಿ ಕೇಂದ್ರಿತ ಚಿಂತನಶೀಲ ಬರಹ, ಹೊಸ ಮೌಲ್ಯಗಳ ಅನ್ವೇಷಣೆ ಇವರ ಕಾದಂಬರಿಗಳ ಕೇಂದ್ರ ಬಿಂದು. ಇವರ ಎಲ್ಲಾ ಕಾದಂಬರಿಗಳು ವ್ಯಕ್ತಿಕೇಂದ್ರಿತ ನೆಲೆಯಲ್ಲಿರುವುದರಿಂದ ಪಾತ್ರಗಳ ಮನಸ್ಸಿನ ವಿಶ್ಲೇಷಣೆಯು ಆದ್ಯತೆ ಪಡೆಯುತ್ತದೆ. ಪಾತ್ರಗಳ ಮನಸ್ಸಿನ ವಿಶ್ಲೇಷಣೆಯ ಮೂಲಕ ಕಾದಂಬರಿಗಳು ಜೀವನದ ಅರ್ಥಕ್ಕಾಗಿ ಹುಡುಕಾಟ ನಡೆಸುತ್ತವೆ. ಕಾರಣ ಆಧುನಿಕತೆ ಮತ್ತು ವಿಚಾರವಾದದ ಸಂಪರ್ಕದಿಂದ ವ್ಯಕ್ತಿವಿಶಿಷ್ಟತಾ ಮೌಲ್ಯಪ್ರಜ್ಞೆಯೊಂದಿಗೆ ಪಾತ್ರಗಳು ತಮ್ಮ ಅಸ್ತಿತ್ವ ಅಥವಾ ಗುರುತನ್ನು ಸ್ಥಾಪಿಸಲು ಹೊರಡುತ್ತವೆ. ಆ ಮೂಲಕ ಕಾದಂಬರಿಗಳು ತಾತ್ವಿಕ ವಿಶ್ಲೇಷಣೆಯಲ್ಲಿ ತೊಡಗುತ್ತವೆ.

ತಾತ್ವಿಕ ಜಿಜ್ಞಾಸೆಯು ಎಲ್ಲಾ ದಾರ್ಶನಿಕ ಬರಹಗಾರರಲ್ಲಿ ಕಂಡುಬರುವ ಸಾಮಾನ್ಯ ಅಂಶ. ಕುಸುಮಾಕರರು ಸಹ ಈ ಬಗೆಯ ಜಿಜ್ಞಾಸೆಯ ಪ್ರವೃತ್ತಿಯುಳ್ಳವರಾದ್ದರಿಂದ ಇವರು ಕೂಡ ದಾರ್ಶನಿಕ ಬರಹಗಾರರೇ. ಕುಸುಮಾಕರರ ಕಾದಂಬರಿಗಳಲ್ಲಿ ದಾರ್ಶನಿಕತೆಯ ಸ್ವರೂಪ ಹೇಗಿದೆ? ಯಾವ ಯಾವ ಬಗೆಯ ದರ್ಶನಗಳನ್ನು ಅವರ ಕಾದಂಬರಿಗಳು ಕಟ್ಟಿಕೊಡುತ್ತವೆ? ಎಂಬುದನ್ನು ಈ ಮುಂದೆ ನೋಡಬಹುದು.

**ಕಾದಂಬರಿಗಳಲ್ಲಿ ದಾರ್ಶನಿಕತೆಯ ಸ್ವರೂಪ**

ಕುಸುಮಾಕರರ ಕಾದಂಬರಿಗಳಲ್ಲಿ ಹುಡುಕಾಟದ ಪ್ರವೃತ್ತಿಯು ಪ್ರಧಾನವಾಗಿ ಕಾಣುತ್ತದೆ. ಇವರ ಎಲ್ಲಾ ಕಾದಂಬರಿಗಳ ನಾಯಕರು ಜೀವನದಲ್ಲಿ ಸೋತವರು. ಬದುಕಿನಲ್ಲಿ ರಿಕ್ತತೆಯನ್ನು ಅನುಭವಿಸಿದವರು, ತನ್ನ ಬಗ್ಗೆ ಕೀಳರಿಮೆ ಬೆಳೆಸಿಕೊಂಡಿರುವ ಮಾನಸಿಕ ದುರ್ಬಲರು, ಅಂತರ್ಮುಖಿಗಳು, ಜೀವನದಲ್ಲಿ ಶಾಂತಿ, ಬದುಕಿನಲ್ಲಿ ಆನಂದವಿಲ್ಲದೆ ಇವರು ಮನಶಾಂತಿಗಾಗಿ ಹಳಹಳಿಸುತ್ತಾರೆ. ಬದುಕಿನಲ್ಲಿ ಆನಂದದ ಅನ್ವೇಷಣೆಗಾಗಿ ಎಲ್ಲಾ ಕಾದಂಬರಿಗಳ ನಾಯಕರು ಪ್ರಯತ್ನಿಸುತ್ತಾರೆ. ಅದರಿಂದ ವಿಭಿನ್ನ ಬಗೆಯ ಜೀವನಾನುಭವಗಳನ್ನು ಪಡೆಯುತ್ತಾರೆಯೇ ಹೊರತು ಅವರ ಹುಡುಕಾಟದ ಅಮೂರ್ತವಸ್ತು ಅವರಿಗೆ ಜೀವನದ ಕಡೆಯವರೆಗೂ ದೊರೆಯುವುದೇ ಇಲ್ಲ. ಈ ಅನ್ವೇಷಣಾ ಪ್ರವೃತ್ತಿಯು ಲೇಖಕರಲ್ಲಿಯೇ ಪ್ರಧಾನವಾಗಿರಬೇಕು. ಇಲ್ಲದಿದ್ದರೆ ಇವರ ಪ್ರಥಮ ಕಾದಂಬರಿ 'ಮುಗಿಯದ ಕತೆ'ಯಿಂದ ಇತ್ತೀಚಿನ 'ಬಯಲು-ಬಸಿರು' ಕಾದಂಬರಿಯವರೆಗೂ ಇದು ವ್ಯಾಪಿಸುತ್ತಿರಲಿಲ್ಲ. 'ಮುಗಿಯದ ಕತೆ'ಯಲ್ಲಿನ ದೇಶಪಾಂಡೆ, 'ನಾಲ್ಕನೆಯ ಆಯಾಮ'ದ ಮನೋಜ್ ಕುಮಾರ್ , 'ನಿರಿಂದ್ರಿಯ'ದ ರೊಳ್ಳಿ. 'ಪರಿಘ'ದ ಅಜೇಯ, 'ಬಯಲು-ಬಸಿರು'ನ ನಾರ್ಮ್ಯಾನ್ ಅಥವಾ ಅನಿಕೇತಾನಂದ ಇವರೆಲ್ಲರೂ ಬದುಕಿನಲ್ಲಿ ಆನಂದದ ಅನ್ವೇಷಣೆಗಾಗಿ ವಿಫಲ ಪ್ರಯತ್ನಗಳನ್ನು ಮಾಡಿ ಸೋತವರೇ. ತನ್ನ ಜೀವಿತಾವಧಿಯಲ್ಲಿ ಮನುಷ್ಯನು ಒಂದಲ್ಲ ಒಂದರ ಹುಡುಕಾಟದಲ್ಲಿ ತೊಡಗಿಕೊಂಡೇ ಇರುತ್ತಾನೆ ಎಂಬ ದರ್ಶನವನ್ನು ಅವರ ಕಾದಂಬರಿಗಳು ನೀಡುತ್ತವೆ. ಇದನ್ನು ಕುರಿತು ರಹಮತ್ ತರೀಕೆರೆಯವರು ಈ ರೀತಿ ಅಭಿಪ್ರಾಯ ಪಡುತ್ತಾರೆ.

> "ತಮಗೆ ಕಾಡುವ ತಾತ್ವಿಕ ಸಮಸ್ಯೆಗಳಿಗೆ ಪರಿಹಾರ ಹುಡುಕಿ ಪಡೆಯುವುದು ಇಲ್ಲಿ ಮುಖ್ಯವಲ್ಲ. ಪಡೆಯುವ ಪರಿಗಿಂತ ಹುಡುಕುವ, ಈ ಹುಡುಕು ಹಾದಿಯಲ್ಲಿ ಬಗೆ ಬಗೆಯ ಅನುಭವಗಳಿಗೆ ಒಡ್ಡಿಕೊಳ್ಳುವ ರೀತಿಯೇ ಮುಖ್ಯ. ಎಂತಲೇ ಅವರ ಕಾದಂಬರಿಗಳ ಕಥೆಗಳು ಗಕ್ಕನೆ ಮುಗಿದಂತೆ ಭಾಸವಾಗುತ್ತದೆ. ಇಲ್ಲಿ ಖಚಿತವಾದ ಒಂದು ನೆಲೆಗೆ ಬಾರದೆ ಅನಿಶ್ಚಿತತೆಯಲ್ಲಿ ಉಳಿದುಬಿಡುವುದು ಕೂಡ ಒಂದು ದಾರ್ಶನಿಕ ನಿಲುವು. ಇದು ಹುಡುಕಾಟ ನಿರಂತರ ಎಂಬುದನ್ನು ಸಂಕೇತಿಸುತ್ತಿರಬಹುದು."[೧]

ಮನುಷ್ಯನ ಬದುಕಿನಲ್ಲಿ ಆನಂದದ ಕೊರತೆಯು ಇಂದು ಕಂಡುಬರುತ್ತದೆ. ಈ ಕೊರತೆಯೇ ಅನ್ವೇಷಣೆಗೆ ಪ್ರಮುಖ ಕಾರಣ ಎನ್ನಬಹುದು. ಪ್ರಕೃತಿ ನಿಯಮಕ್ಕೆ ವಿರುದ್ಧವಾಗಿರುವ ಕೆಲವು ಕಟ್ಟುಪಾಡು, ನಿಯಮಗಳು

ನಾಗರಿಕ ಜೀವನದಲ್ಲಿವೆ. ಇವು ಮನುಷ್ಯನ ಮೂಲ ಪ್ರವೃತ್ತಿಯೊಂದಿಗೆ ಹೊಂದಾಣಿಕೆಯಾಗದೆ ಸಂಘರ್ಷಕ್ಕಿಳಿದಿವೆ. ಇದು ಆಧುನಿಕ ಮಾನವನ ಮಾನಸಿಕ ಏರಿಳಿತಗಳಿಗೆ ಮುಖ್ಯಕಾರಣವಾಗಿದೆ. ಆಧುನಿಕತೆ, ನಗರೀಕರಣಗಳಿಂದ ಮನುಷ್ಯನು ಒಂಟಿ ಜೀವಿಯಾಗಿ ಬದುಕುವ ಸ್ಥಿತಿಯು ಬಂದಿದೆ. ಇದು ಮನುಷ್ಯನಲ್ಲಿ ಭಾವನಾತ್ಮಕ ಸಮಸ್ಯೆಗಳನ್ನು ಹುಟ್ಟುಹಾಕಿದೆ. ಒಂಟಿತನ, ಅನಾಥಪ್ರಜ್ಞೆ, ಬದುಕಿನಲ್ಲಿಯ ರಿಕ್ತತೆ ಹೆಚ್ಚಾಗತೊಡಗಿ, ಬದುಕು ಜೀವನಾನಂದದಿಂದ ದೂರವಾಗುತ್ತ‌ಗ. ಇದು ಮನುಷ್ಯನನ್ನು ಆನಂದದ ಅನ್ವೇಷಣೆಯಲ್ಲಿ ತೊಡಗುವಂತೆ ಪ್ರೇರೇಪಿಸುತ್ತಿರಬಹುದು. ಜೊತೆಗೆ ಅನ್ವೇಷಣೆಯು ಮನುಷ್ಯನ ಮೂಲಭೂತ ಗುಣವೂ ಇರಬಹುದು. ಹಾಗಾಗಿ ಕಾದಂಬರಿಗಳಲ್ಲಿ ನಿರಂತರವಾದ ಅನ್ವೇಷಣೆಯು ಒಂದು ದರ್ಶನವಾಗಿ ಮೂಡಿಬಂದಿದೆ.

ಕುಸುಮಾಕರರ ಬರವಣಿಗೆಯು ವ್ಯಕ್ತಿಕೇಂದ್ರಿತವಾದುದು. ವ್ಯಕ್ತಿಯ ಆಂತರಿಕ ತುಡಿತಗಳ ಅಭಿವ್ಯಕ್ತಿಯು ಇವರ ಕಾದಂಬರಿಗಳ ಕೇಂದ್ರಬಿಂದು. ಇದು ನವ್ಯಸಾಹಿತ್ಯದ ಪ್ರಧಾನ ಲಕ್ಷಣವೂ ಹೌದು. ಇಲ್ಲಿ ವ್ಯಕ್ತಿ ಮುಖ್ಯವೇ ಹೊರತು ಅವನು ಯಾವ ಜಾತಿಯವ, ಯಾವ ಧರ್ಮದವ ಎಂಬುದೆಲ್ಲವೂ ಅಮುಖ್ಯ. ಆದರೆ ಇತರ ನವ್ಯ ಸಾಹಿತಿಗಳಿಗೆ ಹೋಲಿಸಿದಲ್ಲಿ ಕುಸುಮಾಕರರು ಇಲ್ಲಿ ವಿಶಿಷ್ಟರಾಗಿ ಕಾಣುತ್ತಾರೆ. ಯು.ಆರ್ .ಅನಂತಮೂರ್ತಿ, ಪಿ.ಲಂಕೇಶ್, ತೇಜಸ್ವಿ ಇವರೆಲ್ಲರ ಬರವಣಿಗೆಯಲ್ಲಿ ಜಾತಿ ಧರ್ಮಗಳ ಪ್ರಸ್ತಾಪವಿದೆ. ಆದರೆ ಕುಸುಮಾಕರರ ಕಾದಂಬರಿಗಳಲ್ಲಿ ಜಾತ್ಯತೀತ ಮತ್ತು ಧರ್ಮಾತೀತ ಮೌಲ್ಯಗಳನ್ನು ಗುರುತಿಸಬಹುದು. 'ಮುಗಿಯದ ಕತೆ'ಯಿಂದ ಆರಂಭಗೊಂಡು 'ಬಯಲು-ಬಸಿರು' ಕಾದಂಬರಿಯವರೆಗೂ ಗಮನಿಸಿದಲ್ಲಿ ಎಲ್ಲಿಯೂ ಇಂತಹ ಪಾತ್ರಗಳು ಇಂಥ ಜಾತಿಯವು, ಇಂಥಾ ಧರ್ಮದವು ಎಂದು ನಮೂದಿಸಿಲ್ಲ. ಇತರ ನವ್ಯ ಲೇಖಕರಿಗೆ ಹೋಲಿಸಿದಲ್ಲಿ, ಜಾತಿಯ, ಧರ್ಮದ ಬಗ್ಗೆ ತಾವು ತಳೆದಿರುವ ತಾಟಸ್ಥ್ಯದ ನಿಲುವು ಅನನ್ಯವಾದುದು. ತಮ್ಮ ವಿಚಾರಗಳ ಸಾರ್ವತ್ರೀಕರಣದ ಉದ್ದೇಶದಿಂದ ಲೇಖಕರು ಈ ರೀತಿ ಮಾಡಿರುವ ಸಾಧ್ಯತೆಯಿದೆ. ಕಾದಂಬರಿಗಳಲ್ಲಿ ನಿರೂಪಿಸಿರುವ ತತ್ವಗಳು ಯಾವುದೇ ಒಂದು ಜಾತಿಗೆ, ಧರ್ಮಕ್ಕೆ ಸೀಮಿತವಾಗದೆ, ಇಡೀ ಮಾನವತೆಯನ್ನು ತಲುಪಲಿ ಮತ್ತು ಅನ್ವಯವಾಗಲಿ ಎಂಬ ಧೋರಣೆ ಇರುವಂತಿದೆ. ಈ ಜಾತ್ಯತೀತ ನಿಲುವು ಧರ್ಮಜಾತಿಗಳ ವಿರುದ್ಧ ತಳೆದ ವೈಚಾರಿಕ ಮಾನವತಾವಾದದ ಹಿಂದೆ ಬಂದುದಲ್ಲ. ಮಾನವನ ಮೂಲಭೂತ ವ್ಯವಸ್ಥೆಯ ಶೋಧನೆಯಿಂದ ಬಂದುದು.

ಆದರೆ ಕುಸುಮಾಕರರ 'ಮುಗಿಯದ ಕತೆ'ಯಿಂದ ಇತ್ತೀಚಿನ ಬಯಲು-ಬಸಿರು ಕಾದಂಬರಿವರೆಗೂ ಎಲ್ಲಾ ವ್ಯಕ್ತಿಕೇಂದ್ರಿತ ಕಾದಂಬರಿಗಳಾಗಿರುವುದರಿಂದ ಸಮುದಾಯದ ಸಂವೇದನೆಗಳು ಇವರಿಂದ ನಿರ್ಲಕ್ಷ್ಯಕ್ಕೆ ಒಳಗಾಗಿವೆ. ಒಬ್ಬ ವ್ಯಕ್ತಿಯ ಅನುಭವಗಳು ಆ ವ್ಯಕ್ತಿಯ ವೈಯಕ್ತಿಕ ಅನುಭವಗಳಾಗುತ್ತವೆಯೇ ಹೊರತು ಸಮುದಾಯವನ್ನು ಪ್ರತಿನಿಧಿಸಲಾರವು. ನಗರೀಕರಣ, ವ್ಯಕ್ತಿವಿಶಿಷ್ಟತೆ, ಅನಾಥಪ್ರಜ್ಞೆ, ಅಸ್ತಿತ್ವವಾದ ಮುಂತಾದ ಪಾಶ್ಚಿಮಾತ್ಯ ಸಾಹಿತ್ಯ ತತ್ವಗಳಿಂದ ಪ್ರೇರಣೆ ಹೊಂದಿ, ರಚಿಸಿದ ಇವರ ಕಾದಂಬರಿಗಳು ಭಾರತೀಯ ಸಮಾಜಕ್ಕೆ ಅನ್ವಯವಾಗುತ್ತವೆಯೇ?, ಕಾದಂಬರಿಕಾರರು ತಮ್ಮ ಕಾದಂಬರಿಗಳಲ್ಲಿ ತಳೆದಿರುವ ಜಾತ್ಯತೀತ, ಧರ್ಮಾತೀತ ನಿಲುವು ಭಾರತೀಯ ಸಮಾಜದಲ್ಲಿ ಇಂದು ಪ್ರಸ್ತುತವೇ?, ಭಾರತೀಯ ಸಮಾಜವು ಜಾತಿ

ಧರ್ಮಗಳಲ್ಲಿ ತುಂಬಾ ಸಂಕೀರ್ಣವಾಗಿದೆ. ಪ್ರತಿಯೊಬ್ಬ ವ್ಯಕ್ತಿಯನ್ನು, ಕ್ಷೇತ್ರವನ್ನು ಅವು ಪ್ರಭಾವಿಸದೆ ಇರುವುದು ಸಾಧ್ಯವಿಲ್ಲ. ಇಂದು ಶೇಕಡ ಎಪ್ಪತ್ತಕ್ಕಿಂತ ಹೆಚ್ಚು ಜನರು. ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದಾರೆ. ಗ್ರಾಮೀಣ ಜನರ ಬದುಕಿನ ಚಿತ್ರಣಗಳಿಲ್ಲದ, ಅವರ ಸಂವೇದನೆಗಳಿಲ್ಲದ ಇವರ ಕೃತಿಗಳು ಜನಸಾಮಾನ್ಯರ ಸಾಮಾಜಿಕ ಆರ್ಥಿಕ ನೋವು ನಲಿವುಗಳಿಗೆ ಸ್ಪಂದಿಸದೆ ಅವರಿಂದ ಬಹುದೂರ ಉಳಿಯುತ್ತವೆ. ಭಾರತೀಯ ಸಮಾಜದ ಬಗ್ಗೆ ಅವರು ತಳೆಯುವ ತಾಟಸ್ಥ್ಯದ ನಿಲುವು ಅವರ ಕಾದಂಬರಿಗಳ ಒಂದು ದೊಡ್ಡ ಮಿತಿಯಾಗಿ ಕಾಣುತ್ತದೆ.

ಎಲ್ಲಾ ನವ್ಯದ ಬರಹಗಾರರಂತೆಯೇ ಕುಸುಮಾಕರರ ಕಾದಂಬರಿಗಳಲ್ಲಿ ಕಾಮವು ಪ್ರಧಾನವಾಗಿ ಬಂದಿದೆ. ಆದರೆ ಕುಸುಮಾಕರರು ಕಾಮವನ್ನು ದೈಹಿಕ ತೃಪ್ತಿಗೆ ಸೀಮಿತಗೊಳಿಸದೆ ಅದರಿಂದಾಚೆಗಿನ ಅಲೌಕಿಕ ಸೆಳೆತದ ಕಡೆಗೆ ಒಲವು ತೋರಿದ್ದಾರೆ. ಕಾಮದಿಂದ ಮನುಷ್ಯನಿಗೆ ದೊರೆಯುವ ದೈಹಿಕ ತೃಪ್ತಿಗಿಂತ ಮಾನಸಿಕ ತೃಪ್ತಿಯು ಮುಖ್ಯವಾದುದು ಎಂಬ ದರ್ಶನವನ್ನು ಕಾದಂಬರಿಯು ಓದುಗರಿಗೆ ನೀಡುತ್ತದೆ. 'ಪರಿಘ' ಕಾದಂಬರಿಯಲ್ಲಿನ ಅಜೇಯನ ದಾಂಪತ್ಯ ಜೀವನದಲ್ಲಿ ದೈಹಿಕ ಸಂಬಂಧಕ್ಕೆ ಯಾವುದೇ ಕೊರತೆಯಿಲ್ಲದಿದ್ದರೂ ಕಾಮದಿಂದಾಚೆಗಿನ ಪ್ರೇಮಕ್ಕಾಗಿ ಅವನ ಮನಸ್ಸು ತುಡಿಯುತ್ತದೆ. ಅದಕ್ಕಾಗಿ ಅವನು ಪರಿತಪಿಸುವ ಬಗೆ ಹೀಗೆ.

> "ತಮ್ಮ ಪ್ರೇಮ ದೇಹದ ಹಸಿವಿನ ಆಚೆ ಇರಲಿಲ್ಲ ಕಾಮದ ಆಳಾಗಿಯೇ ಬಾಳಿತು. ಓ! ತನಗೂ ಅಂತಹ ನಲ್ಲೆ ಪ್ರೇಯಸಿ ದೊರೆತಿದ್ದರೆ! ತನ್ನ ಸೃಜನಶೀಲತೆ ಹೆಚ್ಚುತ್ತಿತ್ತು. ಅದಕ್ಕೆ ಕಾಂತಿ ಬರುತ್ತಿತ್ತು. ಪ್ರಣಯದ ಅಮೃತ ಸ್ಪರ್ಶವಿಲ್ಲದ ಬದುಕು ಎಂತಹ ಬದುಕು."[೨]

ಪ್ರೇಮ ಮತ್ತು ಕಾಮ ಇವುಗಳ ನಡುವಿನ ಸಂಬಂಧವನ್ನು ಕಾದಂಬರಿಗಳಲ್ಲಿ ವಿಶ್ಲೇಷಿಸಲಾಗಿದೆ. ಅಜೇಯನಿಗೆ ಒಂದು ಹಂತದಲ್ಲಿ ಮಾನಸಿಕ ದುಗುಡಗಳು ಹೆಚ್ಚಿ ಅಸ್ವಸ್ಥನಾದಾಗ ಪ್ರತಿಮಾಳ ಸಂತೈಸುವಿಕೆಯನ್ನು ಕಾದಂಬರಿಯು ಈ ರೀತಿ ನಿರೂಪಿಸುತ್ತದೆ.

> "ಪ್ರತಿಮಾಳ ತೊಡೆಯ ಮೇಲೆ ಹಸುಗೂಸಿನಂತೆ ತಲೆಯಿಟ್ಟು ಮಲಗಿಕೊಂಡ. ಅವಳು ಮೆಲ್ಲಮೆಲ್ಲನೆ ಅವನ ತಲೆಯನ್ನು ತಟ್ಟುತ್ತಿದ್ದಳು"[೩]

ಇಂತಹುದೇ ಸನ್ನಿವೇಶ 'ನಿರಿಂದ್ರಿಯ' ಕಾದಂಬರಿಯಲ್ಲಿಯೂ ಬಂದಿದೆ. ಮನೋವೈಕಲ್ಯದಿಂದ ಹಾಸಿಗೆ ಹಿಡಿದ ರೊಳ್ಳಿಯೊಡನೆ ವೃಂದಾಳು ನಡೆದುಕೊಳ್ಳುವ ರೀತಿಯನ್ನು ಕಾದಂಬರಿಯು ನಿರೂಪಿಸುವ ಪರಿಯಿದು.

> "ಗಂಡ ಎಳೆಯ ಮಗುವಿನಂತೆ ಆಗಿದ್ದಾನೆ. ಅವಳಿಗೆ ಹಾಸಿಗೆಯಲ್ಲಿ ತನ್ನ ಮಗುವೆ ಮಲಗಿದ ಭಾಸವಾಯಿತು. ಪುತ್ರ ವಾತ್ಸಲ್ಯದಿಂದ ಅವನ ಗದ್ದವನ್ನು ಹಿಡಿದು ಹಣೆಗೊಂದು ಮೆಲ್ಲನೆ ಮುದ್ದಿಟ್ಟಳು. ಅಪ್ಪಿಕೊಂಡು ತಲೆಯನ್ನು ಮೂಸಿದಳು -ರೊಳ್ಳಿ ಮೆಲ್ಲನೆ ನಕ್ಕ."[೪]

ಹೆಂಡತಿಯ ಪ್ರೀತಿಯಲ್ಲಿ ಮಾತೃವಾತ್ಸಲ್ಯವನ್ನು ಕಾಣುವ ಹಂಬಲ ಕಾದಂಬರಿಯಲ್ಲಿದೆ. ಗಂಡ-ಹೆಂಡತಿಯ ಪ್ರೇಮದಲ್ಲಿ ದೈಹಿಕ ಸಂಬಂಧದಿಂದಾಚೆಗಿನ ಭಾವನಾತ್ಮಕ ಪ್ರೀತಿಯನ್ನು ತರಲು ಪ್ರಯತ್ನಿಸಿರುವ ನವ್ಯದ

ಬರಹಗಾರರು ತುಂಬಾ ವಿರಳ. ಮನುಷ್ಯನ ಬದುಕಿನಲ್ಲಿ ಕಾಮಕ್ಕೆ ಪ್ರಾಧಾನ್ಯತೆ ಇರುವುದಾದರೂ, ಅದು ಪ್ರೇಮದ ಅಡಿಯಾಳಾಗಿ ಬರಬೇಕು. ದೈಹಿಕ ಸಂಬಂಧದ ಆಚೆಗಿರುವ ಪ್ರೇಮವೇ ಸತ್ವಯುತವಾದುದು ಎಂಬ ದರ್ಶನವನ್ನು ಕಾದಂಬರಿಗಳು ಕಟ್ಟಿಕೊಡುತ್ತವೆ. ಇಲ್ಲಿ ಭಾವನಾತ್ಮಕ ಬದುಕಿನತ್ತ ಒಲವಿದೆ. ಮನುಷ್ಯನ ಮನಸ್ಸು ಯಾಂತ್ರಿಕತೆಯಿಂದ ಮಾನವೀಯತೆಯೆಡೆಗೆ ಹೊರಳಬೇಕು. ಬದುಕು ಒಣಗಿದ ಮರದ ಕೊರಡಾಗುವುದಕ್ಕಿಂತ ಚಿಗುರಿದ ಮರವಾಗಬೇಕೆಂಬ ನಿಲುವು ಕಾದಂಬರಿಗಳದ್ದು. ವ್ಯಕ್ತಿಯು ತಾನೇ ಸಂಕುಚಿತವಾದ ಪರಿಘವನ್ನು ನಿರ್ಮಿಸಿಕೊಂಡಿರುತ್ತಾನೆ. ಅದರಿಂದಾಚೆಗೆ ಅವನ ಆಲೋಚನೆಗಳು ಹರಿಯುವುದೇ ಇಲ್ಲ. ಮಾನಸಿಕ ಅಶಾಂತಿಯಿಂದ ತೊಳಲಾಡುತ್ತಾನೆ. ಎಲ್ಲಿಯವರೆಗೆ ಮನುಷ್ಯನು ತಾನು ನಿರ್ಮಿಸಿಕೊಂಡಿರುವ ಪರಿಘವನ್ನು ದಾಟಿ ಬರುವುದಿಲ್ಲವೋ ಅಲ್ಲಿಯವರೆಗೂ ಅವನಿಗೆ ಜೀವನದಲ್ಲಿ ಆನಂದ ದೊರೆಯುವುದಿಲ್ಲ ಎಂಬ ದರ್ಶನವು 'ಇರುವುದೆಲ್ಲವ ಬಿಟ್ಟು ಇರದುದೆಡೆಗೆ ತುಡಿವುದೇ ಜೀವನ' ಎಂಬ ಅಡಿಗರ ಮಾತನ್ನು ನೆನಪಿಸುತ್ತದೆ.

ಮನುಷ್ಯನಿಗೆ ತನಗೆ ಯಾವುದರ ಕೊರತೆಯಿದೆಯೋ ಅದು ಅತಿ ಅಗತ್ಯವಾಗಿ ಕಾಣುತ್ತದೆ. ತನಗೆ ಏನಿಲ್ಲವೋ ಅದರತ್ತ ಮನುಷ್ಯನ ಆಕರ್ಷಣೆಯಿದೆ. ಇದು ಮನುಷ್ಯನ ಸಹಜ ಸ್ವಭಾವ. 'ಬಯಲು-ಬಸಿರು' ಕಾದಂಬರಿಯಲ್ಲಿನ ನಾರ್ಮ್ಯಾನ್‌ನಿಗೆ ತಾನು ವಾಸಿಸುತ್ತಿರುವ ಪರಿಸರದಲ್ಲಿ ಮಾನವೀಯ ಮೌಲ್ಯಗಳ ಕೊರತೆ ಕಂಡುಬರುತ್ತವೆ. ಅದನ್ನು ಪಡೆಯುವ ಸಲುವಾಗಿ ದೂರದ ಅಮೇರಿಕಾದಿಂದ ಭಾರತಕ್ಕೆ ಬರುತ್ತಾನೆ. ಮಾನಸಿಕ ಶಾಂತಿಯನ್ನು ಪಡೆಯಲು ಹಲವಾರು ಗುರುಗಳನ್ನು ಆಶ್ರಮಗಳನ್ನು ಸಂದರ್ಶಿಸುತ್ತಾನೆ. ಇಲ್ಲದ್ದರತ್ತ ಮನುಷ್ಯನ ಮನಸ್ಸು ಆಕರ್ಷಣೆಗೊಳಗಾಗುವುದು ಸ್ವಾಭಾವಿಕವಾದದ್ದು ಎಂಬ ಧೋರಣೆಯು ಕಾದಂಬರಿಗಳಲ್ಲಿದೆ. ಅಮೇರಿಕೆಯಲ್ಲಿ ಆರ್ಥಿಕ ಸಮೃದ್ಧಿಯಿದೆ. ಆದರೆ ಮಾನವೀಯ ಮೌಲ್ಯಗಳ ಕೊರತೆಯಿದೆ. ಹೃದಯ ದಾರಿದ್ರ್ಯವಿದೆ. ಭಾರತೀಯರಿಗೆ ಮೌಲ್ಯಗಳಲ್ಲಿ ಮನುಷ್ಯ ಸಂಬಂಧಗಳಲ್ಲಿ ಕೊರತೆ ಕಂಡುಬಾರದಿದ್ದರೂ ಆರ್ಥಿಕ ದಾರಿದ್ರ್ಯವಿದೆ. ಇದು ಭಾರತೀಯರನ್ನು ಅಮೇರಿಕಾದ ಕಡೆಗೂ, ಅಮೇರಿಕನ್ನರು ಭಾರತದ ಕಡೆಗೆ ಆಕರ್ಷಿತರಾಗುವಂತೆ ಪ್ರೇರೇಪಿಸುತ್ತದೆ.

ಮನುಷ್ಯನ ಬದುಕನ್ನು ರೂಪಿಸುವುದರಲ್ಲಿ ಬಾಲ್ಯದ ಅನುಭವಗಳು ಅತಿಮಹತ್ವವಾದವು ಎಂಬ ದರ್ಶನವನ್ನು ಕಾದಂಬರಿಗಳು ತರುತ್ತವೆ. ಬಾಲ್ಯದಲ್ಲಿ ಪಡೆದ ಅನುಭವಗಳು ಮನುಷ್ಯನ ಜೀವನದ ಅಂತ್ಯದವರೆಗೂ ಸ್ಮೃತಿಯಲ್ಲಿರುತ್ತವೆ. ಬಾಲ್ಯದ ಅನುಭವಗಳ ತಳಹದಿಯ ಮೇಲೆಯೇ ವ್ಯಕ್ತಿಯ ವ್ಯಕ್ತಿತ್ವ ನಿರ್ಮಾಣವಾಗುತ್ತದೆ. 'ನಿರಿಂದ್ರಿಯ' ಕಾದಂಬರಿಯಲ್ಲಿನ ರೊಳ್ಳಿ ಜಿಪುಣನಾಗಿ ಮಾರ್ಪಾಡಾಗಲು ಅವನು ಬಾಲ್ಯದಲ್ಲಿ ಪಡೆದ ಅನುಭವಗಳು ಕಾರಣವಾಗಿವೆ. 'ಪರಿಘ' ಕಾದಂಬರಿಯಲ್ಲಿನ ಅರವಿಂದನಲ್ಲಿ ಮಾನಸಿಕ ದೃಢತೆಯನ್ನು ಕಾಣುತ್ತೇವೆ. ಇದಕ್ಕೆ ಅವನು ಬಾಲ್ಯದಲ್ಲಿ ಅನುಭವಿಸಿದ ಕಷ್ಟ-ಕಾರ್ಪಣ್ಯಗಳು, ತಂದೆಯ ಆದರ್ಶ, ತಾಯಿಯ ಮಾತೃಪ್ರೇಮ ಇವೆಲ್ಲವೂ ಅರವಿಂದನ ವ್ಯಕ್ತಿತ್ವ ನಿರ್ಮಾಣದಲ್ಲಿ ಪಾತ್ರವಹಿಸುತ್ತವೆ. 'ಬಯಲು-ಬಸಿರು' ಕಾದಂಬರಿಯಲ್ಲಿನ 'ನಾರ್ಮ್ಯಾನ್'ನ ವ್ಯಕ್ತಿತ್ವವನ್ನು ಪ್ರಭಾವಿಸಿದ ಅಂಶಗಳಲ್ಲಿ ಆತನ

ಬಾಲ್ಯವೇ ನಮಗೆ ಪ್ರಧಾನವಾಗಿ ಕಾಣುತ್ತದೆ. ತಂದೆ-ತಾಯಿಯರ ಕೌಟುಂಬಿಕ ಸಮಸ್ಯೆ, ವಿವಾಹ ವಿಚ್ಛೇದನ, ತಂದೆ ತಾಂತ್ರಿಕ ಕಾಮಕೇಳಿಯಲ್ಲಿ ಆಸಕ್ತನಾಗಿ ಅವರ ಹಿಂದೆ ನಡೆದದ್ದರ ಪರಿಣಾಮವಾಗಿ, ಅವನು ವಿವಾಹ, ಕುಟುಂಬ ಇವುಗಳಲ್ಲಿ ನಿರಾಸಕ್ತನಾಗಿ, ಅಧ್ಯಾತ್ಮದತ್ತ ಆಕರ್ಷಿತನಾಗಿ ಭಾರತಕ್ಕೆ ಬರುತ್ತಾನೆ. ಅವನು ಪಡೆದ ಬಾಲ್ಯದಲ್ಲಿನ ಅನುಭವಗಳಿಗನುಗುಣವಾಗಿ ಅವನ ವ್ಯಕ್ತಿತ್ವ ವಿಕಾಸವಾಗುತ್ತ ಹೋಗುತ್ತದೆ. ಇದು ಕಾದಂಬರಿಯು ಪರೋಕ್ಷವಾಗಿ ನೀಡುವ ಹೊಸದೊಂದು ದರ್ಶನ.

ಮನುಷ್ಯ ಸಮಾಜಜೀವಿ, ಭಾವನಾಜೀವಿ ಯಾವುದೇ ಬಂಧನದಿಂದ ಕಳಚಿಕೊಂಡರೂ, ಮತ್ತೊಂದು ಬಗೆಯ ಬಂಧನಗಳಿಗೆ ಮನುಷ್ಯ ಒಳಗಾಗುತ್ತಾನೆ. ನಾಗರಿಕ ಬದುಕೇ ಬೇಡವೆಂದು ಕಾಡಿಗೆ ಹೋದರೂ, ಅಲ್ಲಿನ ಪರಿಸರದೊಡನೆ ಭಾವನಾತ್ಮಕ ಸಂಬಂಧ ಬೆಳೆಯುವ ಸಾಧ್ಯತೆಯು ಹೆಚ್ಚು. 'ಬಯಲು-ಬಸಿರು' ಕಾದಂಬರಿಯಲ್ಲಿನ ನಾರ್ಮ್ಯಾನ್ ಎಲ್ಲವನ್ನು ತ್ಯಜಿಸಿ ಭಾರತಕ್ಕೆ ಬಂದು ಅಧ್ಯಾತ್ಮ ಯೋಗಿಯಾಗಿ ಮಾರ್ಪಾಡಾದರೂ, ಅವನ ತಂದೆ-ತಾಯಿಯ ನೆನಪು ಅವನಿಗೆ ಆಗಾಗ್ಗೆ ಬರುತ್ತದೆ. ಅಧ್ಯಾತ್ಮವು ವಾಣಿಜ್ಯ ವೃತ್ತಿಯ ಆಚೆಗಿನದು ಎಂಬ ಉದ್ದೇಶದಿಂದ ಅಮೇರಿಕಾದಿಂದ ಭಾರತಕ್ಕೆ ಬಂದು ಆಶ್ರಮವಾಸಿಯಾಗುತ್ತಾನೆ. ಆಶ್ರಮದ ಬೆಳವಣಿಗೆಯಲ್ಲಿ ವಾಣಿಜ್ಯ ವೃತ್ತಿಯು ಪ್ರಧಾನ ಪಾತ್ರವಹಿಸುತ್ತಿರುವುದು ಅವನ ಗಮನಕ್ಕೆ ಬರುತ್ತದೆ. ಸಮಾಜದಿಂದ ಹೊರಗೆ ಮನುಷ್ಯ ಬದುಕಲು ಪ್ರಯತ್ನಿಸಿದರೂ, ಎಲ್ಲ ಬಗೆಯ ಬಂಧನಗಳನ್ನು ಕತ್ತರಿಸಿಕೊಳ್ಳಲು ಆಶಿಸಿದರೂ, ಮತ್ತೊಂದೆಡೆ ಸಮಾಜವು ಮತ್ತೊಂದು ಬಗೆಯ ಬಂಧನಗಳಿಗೆ ಮನುಷ್ಯನನ್ನು ಒಳಗು ಮಾಡುತ್ತದೆ ಎಂಬ ತಾತ್ವಿಕತೆ 'ಬಯಲು-ಬಸಿರು' ಕಾದಂಬರಿಯಲ್ಲಿ ಬಂದಿದೆ. ಜೊತೆಗೆ ಆಧುನಿಕ ಜಗತ್ತಿನಲ್ಲಿ ಪ್ರತಿಯೊಂದು ಕ್ಷೇತ್ರಗಳು ಒಂದರೊಡನೊಂದು ಅಂತರ್‌ಸಂಬಂಧ ಹೊಂದಿದ್ದು, ಒಂದನ್ನೊಂದು ಪ್ರಭಾವಿಸುತ್ತವೆ. ವಾಣಿಜ್ಯ, ರಾಜಕೀಯ, ಧಾರ್ಮಿಕ ಕ್ಷೇತ್ರಗಳು ಒಂದರ ಮೇಲೆ ಮತ್ತೊಂದು ಪ್ರಭಾವ ಬೀರುತ್ತವೆ. ಇವು ಪ್ರತ್ಯೇಕವಾಗಿ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಲು ಸಾಧ್ಯವಿಲ್ಲ ಎಂಬ ಅಭಿಪ್ರಾಯ ಕಾದಂಬರಿಯಲ್ಲಿದೆ.

ವ್ಯಕ್ತಿಯ ಆಂತರಿಕ ಬೆಳವಣಿಗೆಯನ್ನು ಗುರುತಿಸಲು ಕಷ್ಟ ಸಾಧ್ಯ. ವ್ಯಕ್ತಿಯಲ್ಲಿ ಆಗುವ ಈ ಬದಲಾವಣೆಗಳನ್ನು ಬೇರೊಬ್ಬರು ಗುರುತಿಸಬಹುದು. ಆದರೆ ವ್ಯಕ್ತಿಯು ತನ್ನಲ್ಲಿ ಏನು ಬದಲಾವಣೆಯಾಗಿದೆ ಎಂದು ಪ್ರಶ್ನೆ ಹಾಕಿಕೊಂಡರೆ ಗೊಂದಲಕ್ಕೊಳಗಾಗುವ ಸಾಧ್ಯತೆಯಿರುತ್ತದೆ. ಕುಸುಮಾಕರರ ಕಾದಂಬರಿಗಳಲ್ಲಿ ಬರುವ ಕಥಾನಾಯಕರು ಸೂಕ್ಷ್ಮಮತಿಗಳು, ಸಂವೇದನಾಶೀಲರು. ಆತ್ಮಾವಲೋಕನ ಮಾಡಿಕೊಳ್ಳುವ ಪ್ರವೃತ್ತಿಯವರು. 'ಮುಗಿಯದ ಕತೆ'ಯಲ್ಲಿನ ದೇಶಪಾಂಡೆ, 'ಪರಿಘ'ದಲ್ಲಿನ ಅಜೇಯ, 'ಬಯಲು-ಬಸಿರು' ಕಾದಂಬರಿಯಲ್ಲಿನ ಅನಿಕೇತಾನಂದ -ಇವರೆಲ್ಲರೂ ಸಮಾಜದ ದೃಷ್ಟಿಯಲ್ಲಿ ಪ್ರತಿಷ್ಠಿತ ಸ್ಥಾನಗಳಿಸಿದವರೆ, ಸಮಾಜದಲ್ಲಿ ಇವರಿಗೆ ವಿಶೇಷ ಗೌರವು ದೊರಕಿರುತ್ತದೆ. ಸಮಾಜದಲ್ಲಿ ದೊರೆಯುತ್ತಿರುವ ಗೌರವಕ್ಕೆ ನಾವು ಪಾತ್ರರೇ ಎಂಬ ಶಂಕೆಗೆ ಅಜೇಯ, ಅನಿಕೇತಾನಂದ ಒಳಗಾಗುತ್ತಾರೆ. ಅವರು ತಮ್ಮಲ್ಲಿ ಯಾವುದೇ ಬಗೆಯ ಆಂತರಿಕ ಬದಲಾವಣೆಗಳಾಗಿಲ್ಲವೆಂಬ ಅನುಮಾನದಿಂದ ಮಾನಸಿಕ ದ್ವಂದ್ವಕ್ಕೆ ಒಳಗಾಗಿ ಮನಶಾಂತಿಯನ್ನು

ಕಳೆದುಕೊಳ್ಳುತ್ತಾರೆ. ಇದು ವ್ಯಕ್ತಿಯ ಆಂತರಿಕ ಬೆಳವಣಿಗೆಯು ಅಮೂರ್ತಸ್ವರೂಪಿಯಾಗಿದ್ದು, ಅವನ ಅರಿವಿಗೆ ಬಾರದೆ ನಡೆಯುವ ಆಂತರಿಕ ಕ್ರಿಯೆ ಎಂಬ ನಿಲುವು ಕಾದಂಬರಿಯಲ್ಲಿದೆ.

'ಬಯಲು-ಬಸಿರು' ಕಾದಂಬರಿಯಲ್ಲಿ ಜ್ಞಾನ ಮತ್ತು ಸ್ಮೃತಿಯ ನಡುವಿನ ವ್ಯತ್ಯಾಸವನ್ನು ಕಾದಂಬರಿಯು ವಿಶ್ಲೇಷಿಸುವುದಕ್ಕೆ ಯತ್ನಿಸಿದೆ. ಆಧುನಿಕ ಜಗತ್ತಿನಲ್ಲಿ ಸ್ಮೃತಿಯನ್ನು ಜ್ಞಾನವೆಂದು ಪರಿಭಾವಿಸಿದ್ದೇವೆ. ಆದರೆ ಜ್ಞಾನವು ಸಮಷ್ಟಿಯಿಂದ ಬರುವಂತಹದ್ದು. ಸೃಷ್ಟಿಯಲ್ಲಿ ಕೆಲವರಿಗೆ ಮಾತ್ರ ಆಗುವ ವಿಶಿಷ್ಟ ದರ್ಶನ ಜ್ಞಾನ ಎಂಬ ನಿಲುವು ಕಾದಂಬರಿಯದು. ಮನುಷ್ಯನಿಗೆ ತನಗೆ ಏನು ಬೇಕು ಎಂಬುದನ್ನು ತಿಳಿಯಲಾಗದೆ, ಅದರ ಹುಡುಕಾಟದಲ್ಲಿಯೇ ಅವನ ಕಾಲಾಹರಣವಾಗುತ್ತದೆ. ಅದನ್ನು ತಿಳಿದಾಗಲೇ ಅವನಿಗೆ ಸಿದ್ಧಿ ಲಭಿಸುತ್ತದೆ. ಆಮೇಲೆ ಬದುಕು ಆನಂದಮಯವಾಗುತ್ತದೆ ಎಂಬ ಧೋರಣೆಯು ಕಾದಂಬರಿಯಲ್ಲಿ ವ್ಯಕ್ತವಾಗುತ್ತದೆ. ಇಲ್ಲಿ ಜ್ಞಾನವು ಸೃಷ್ಟಿಯಲ್ಲಿ ಕೆಲವರಿಗೆ ಮಾತ್ರ ಸಿಗುತ್ತದೆ ಎಂಬುದನ್ನು ವ್ಯಕ್ತಿವಿಶಿಷ್ಟತೆಯನ್ನು ಪ್ರತಿಪಾದಿಸಲು ಕಾದಂಬರಿಯು ಬಳಸಿಕೊಂಡಿದೆ. ಆದರೆ ವ್ಯಕ್ತಿಯು ತನ್ನ ಜೀವಿತಾವಧಿಯಲ್ಲಿ ಪಡೆಯುವ ಅನುಭವಗಳು ಜ್ಞಾನದ ಒಂದು ಭಾಗ ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ವ್ಯಕ್ತಿಯ ಅನುಭವಗಳನ್ನು ಜ್ಞಾನದ ವ್ಯಾಪ್ತಿಯಿಂದ ಹೊರಗುಳಿಸಿರುವುದು ಕಾದಂಬರಿಯ ಒಂದು ಮಿತಿಯಾಗಿ ಕಾಣುತ್ತದೆ. ಮನುಷ್ಯನು ತನಗೆ ಬೇಕಾದುದು ಏನೆಂದು ತಿಳಿಯುವುದು ಅಷ್ಟು ಸುಲಭದ ಕಾರ್ಯವಲ್ಲ. ಇದನ್ನು ತಿಳಿಯುವುದರಲ್ಲಿಯೇ ಮನುಷ್ಯ ಜೀವನದ ಸಾರ್ಥಕತೆಯು ಅಡಗಿದೆ. ಅದು ಎಲ್ಲರಿಗೂ ತಿಳಿಯುತ್ತದೆಂಬುದರಲ್ಲಿ ನಂಬಿಕೆಯೂ ಇಲ್ಲ. ಜ್ಞಾನವನ್ನು ಬಹು ಸಂಕೀರ್ಣವಾದುದು ಎಂಬ ಹಿನ್ನೆಲೆಯಲ್ಲಿ ಅದನ್ನು ಪರಿಭಾವಿಸಲು ಕಾದಂಬರಿ ಯತ್ನಿಸಿದೆ. ಒಂದೆಡೆ ಈ ಬಗೆಯ ಜ್ಞಾನದಿಂದ ಮನುಷ್ಯನಿಗೆ ಆನಂದ ದೊರೆತರೆ, ಮತ್ತೊಂದೆಡೆ ನಿಷ್ಪಕ್ಷಪಾತವಾದ ಆತ್ಮಾವಲೋಕನದಿಂದ ಅದನ್ನು ಪಡೆಯಬಹುದು ಎಂಬ ಧೋರಣೆಯನ್ನು ಇದು ಹೊಂದಿದೆ.

ಮಾನವ ಅಂತರ್ಮುಖಿಯಾಗಿ ಆತ್ಮವಿಮರ್ಶೆ ಮಾಡಿಕೊಳ್ಳಬೇಕು. ತನ್ನ ಆತ್ಮಸಾಕ್ಷಿಗೆ ವಿರುದ್ಧವಾಗಿ ನಡೆದುಕೊಳ್ಳದೆ ತನ್ನ ಅಂತರಂಗದ ಕರೆಗೆ ಕಿವಿಗೊಡಬೇಕು. ಅದರಂತೆ ನಡೆಯಬೇಕು. ಮನುಷ್ಯನ ಅಂತರಂಗಕ್ಕನುಗುಣವಾದ ಬಾಹ್ಯ ನಡವಳಿಕೆಗಳಿದ್ದರೆ ಮಾನಸಿಕ ದ್ವಂದ್ವಗಳು ಕಡಿಮೆಯಾಗುತ್ತವೆ. ಆಲೋಚನೆ, ನಡೆ-ನುಡಿಗಳಲ್ಲಿ ಕಂಡುಬರುವ ಹೊಂದಾಣಿಕೆಯೇ ಇದಕ್ಕೆ ಕಾರಣ. ಇದರಿಂದ ಬದುಕಿನಲ್ಲಿ ಸಹಜತೆ ಕಂಡುಬರುತ್ತದೆ, ಚೈತನ್ಯ ತುಂಬುತ್ತದೆ. ಇದರಿಂದ ಮನುಷ್ಯನ ಜೀವನವು ಸಾರ್ಥಕತೆಯೆಡೆಗೆ ಪಯಣಿಸುತ್ತದೆಯೆಂದು ಅಭಿಪ್ರಾಯಪಡಬಹುದು. ಮನುಷ್ಯನು ಆತ್ಮಾನಂದ ಪಡೆಯುವ ಬಗೆಗೆ ಕಾದಂಬರಿಯು ಕಂಡುಕೊಳ್ಳುವ ದರ್ಶನವಿದು.

ಆಧುನಿಕ ನಾಗರಿಕತೆಯು ಮನುಷ್ಯನ ಸಹಜವಾದ ಬೆಳವಣಿಗೆಗೆ ಪೂರಕವಾಗಿಲ್ಲ. ಇಂದಿನ ನಾಗರಿಕತೆಯು ಪ್ರಕೃತಿಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳದೆ ಅದರೊಡನೆ ಘರ್ಷಣೆಗಿಳಿದಿದೆ. ಅದರ ಫಲವಾಗಿಯೇ ಮನುಷ್ಯನಲ್ಲಿ ಇಂದು ಹಲವಾರು ಗೊಂದಲಗಳು, ದ್ವಂದ್ವಗಳು, ಮಾನಸಿಕ ಏರಿಳಿತಗಳು ಉಂಟಾಗಿವೆ.

ಇದನ್ನು ಕುಸುಮಾಕರರು ತಮ್ಮ ಎಲ್ಲಾ ಕಾದಂಬರಿಗಳಲ್ಲಿಯೂ ಪ್ರಧಾನವಾಗಿ ತಂದಿದ್ದಾರೆ. ವ್ಯಕ್ತಿವೈಶಿಷ್ಟ್ಯದಿಂದ ಕೂಡಿದ ಮಾನವರ ಚಿತ್ರಣವು ಇವರ ಎಲ್ಲಾ ಕಾದಂಬರಿಗಳ ಕೇಂದ್ರಬಿಂದುವಾದರೂ, ಮನುಷ್ಯನು ಪ್ರಕೃತಿಯೊಂದಿಗೆ ಹೊಂದಾಣಿಕೆ ಮಾಡಿಕೊಂಡು ಬದುಕಬೇಕೆಂಬ ದರ್ಶನವು ಕಾದಂಬರಿಗಳಲ್ಲಿ ಬಂದಿದೆ. ವ್ಯಕ್ತಿಯ ವ್ಯಕ್ತಿತ್ವವು ಸ್ವಾಭಾವಿಕವಾಗಿ ಬೆಳವಣಿಗೆಯಾಗಬೇಕು. ಮನುಷ್ಯ ತಾನು ಏನು ಅಲ್ಲವೋ ಅದಾಗಬಾರದು. ತಾನು ಏನಾಗಿರುವನೋ ಅದು ಅನಿರ್ಬಂಧಿತವಾಗಿ ಬೆಳೆಯಬೇಕು.

"ಸಂಗೀತದ ಸ್ವಾದನೆಗೆ ರಾಗದ ಹೆಸರು ಅನಾವಶ್ಯಕ. ಮಗು ಹಸಿರನ್ನು, ಹಕ್ಕಿಯ ಹಾಡನ್ನು ಕಂಡು ಹಿಗ್ಗುತ್ತದೆ."[೫]

-ಎಂಬ ಸಾಲುಗಳಲ್ಲಿ ಇದೇ ಧೋರಣೆ ವ್ಯಕ್ತವಾಗಿದೆ. ಸಂಗೀತವನ್ನು ಆಸ್ವಾದಿಸುವ ಗುಣ ಮನುಷ್ಯನಿಗೆ ಮೂಲಭೂತವಾಗಿ ಇರುವಂಥದ್ದು. ಇದನ್ನು ಆಸ್ವಾದಿಸಲು ರಾಗದ ಹೆಸರು, ಗಾಯಕರು ಯಾರು? ಇತ್ಯಾದಿ ಅನಾವಶ್ಯಕ. ಇವು ಮನುಷ್ಯನು ಮಾಡಿಕೊಂಡಿರುವ ಕೃತಕ ನಿರ್ಮಾಣ. ಹಾಗೆಯೇ ಮಗುವಿಗೆ ಹಸಿರನ್ನು, ಹಕ್ಕಿಯ ಹಾಡನ್ನು ಕಂಡಾಗ ನಗಲು ಕಲಿಸಿಕೊಟ್ಟವರಾರು? ಇದು ಮಗುವಿಗೆ ಸ್ವಾಭಾವಿಕವಾಗಿ ಇರುವಂತಹುದು. ಮನುಷ್ಯನ ಬೆಳವಣಿಗೆಯು ಜೀವನದ ಸ್ವಭಾವಿಕ ನಿಯಮವಾಗಿದೆ. ಅದಕ್ಕಾಗಿ ಮನುಷ್ಯ ಯಾವ ಪ್ರಯತ್ನವನ್ನೂ ಮಾಡುವ ಅಗತ್ಯ ಕಂಡುಬರುವುದಿಲ್ಲ. ಎಲ್ಲಾ ಪಶು ಪಕ್ಷಿ ಜೀವಿಗಳಂತೆಯೇ ಮನುಷ್ಯ ನಿಸರ್ಗದ ಒಂದು ಅಂಗವಾಗಿದ್ದಾನೆ. ನಿಸರ್ಗದ ನಿಯಮಗಳಡಿಯಲ್ಲಿಯೇ ಮನುಷ್ಯನ ಬೆಳವಣಿಗೆಯಾಗಬೇಕು. ಅದು ಅವನ ಸಹಜ ವಿಕಾಸವೂ ಹೌದು. ಆದ್ದರಿಂದ ಮನುಷ್ಯ ಸೃಷ್ಟಿ ನಿಯಮಕ್ಕೆ ಅಧೀನವಾಗಿರಬೇಕು. ಅಂತಹ ವ್ಯಕ್ತಿಯ ಬದುಕು ಯಾವುದರಿಂದಲೂ ನಿಯಂತ್ರಿಸಲ್ಪಡುವುದಿಲ್ಲ. ಅದು ಅನಿಯಂತ್ರಿತವಾದದ್ದು. ಆದರೆ ಇಂದಿನ ಆಧುನಿಕ ಯುಗದಲ್ಲಿ ನೂರೆಂಟು ಬಗೆಯ ಒತ್ತಡಗಳಿಂದ ಮನುಷ್ಯನು ತನ್ನ ಮಾನಸಿಕ ಶಾಂತಿಯನ್ನು ಕಳೆದುಕೊಂಡಿದ್ದಾನೆ. ಕೀರ್ತಿಯ ಬೆನ್ನು ಹತ್ತಿದ್ದಾನೆ. ಅನೇಕ ಬಗೆಯ ಭ್ರಮೆಗಳನ್ನು ಸೃಷ್ಟಿಸಿಕೊಂಡಿದ್ದಾನೆ. ಹಲವು ರೀತಿಯ ಮುಖವಾಡಗಳನ್ನು ತನ್ನ ನಿಜ ಬದುಕಿನಲ್ಲಿ ಧರಿಸಿದ್ದಾನೆ. ಇವೆಲ್ಲಾ ಮಾನಸಿಕ ವಿಕೃತಿಗಳು ಎಂಬ ಅಭಿಪ್ರಾಯವು ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. ಕೀರ್ತಿಯು ಕ್ಷಣಿಕ ಎಂಬ ಅಭಿಪ್ರಾಯದೊಂದಿಗೆ ರಷ್ಯಾದ ಘಟನೆಯನ್ನು ಕಾದಂಬರಿಯು ಪ್ರಸ್ತಾಪಿಸುತ್ತದೆ. ಮನುಷ್ಯರು ತಮ್ಮ ಮನಶಾಂತಿಗಾಗಿ ನಿರ್ಮಿಸಿಕೊಂಡಿರುವ ಭ್ರಮೆಗಳಿಂದ, ಮುಖವಾಡಗಳನ್ನು ಕಳಚಿ ಹಾಕಿ ಪ್ರಕೃತಿ ನಿಯಮದೊಂದಿಗೆ ಹೊಂದಿಕೊಂಡು ಬದುಕಿದರೆ ಮಾತ್ರ ವ್ಯಕ್ತಿಯ ವ್ಯಕ್ತಿತ್ವದ ಸಹಜ ಬೆಳವಣಿಗೆಯಾಗುತ್ತದೆ ಎಂಬ ದರ್ಶನವು ಕಾದಂಬರಿಯಲ್ಲಿ ಬಂದಿದೆ. ಕುಸುಮಾಕರರ ಎಲ್ಲಾ ಕಾದಂಬರಿಗಳಲ್ಲಿಯೂ ನಿಸರ್ಗದೊಡನೆ ಮನುಷ್ಯನು ಹೊಂದಾಣಿಕೆ ಮಾಡಿಕೊಳ್ಳಬೇಕೆಂಬ ದರ್ಶನ ಅಲ್ಲಲ್ಲಿ ಓದುಗರ ಗಮನಸೆಳೆಯುತ್ತದೆ. ಕುಸುಮಾಕರರ 'ನೈಸರ್ಗಿಕವಾದ'ದ ಬಗೆಗಿರುವ ಒಲವು ಅವರ ಕಾದಂಬರಿಗಳಲ್ಲಿ ವ್ಯಕ್ತವಾಗುತ್ತದೆ.

"ನಿಜವಾದ ನಿಸರ್ಗ ಸಹಜವಾದ ಹಸಿವೆಗೆ, ನೀರಡಕಿಗೆ ಪರಿಹಾರ ಇದೆ. ಆದರೆ ಅಸಹಜವಾದ ಹಸಿವು, ಬಾಯಾರಿಕೆ ಇವು ವಿಕೃತಿಗಳು. ನಾನು ಸುಖಿಯಾಗಬಲ್ಲೆ. ಆದರೆ ನಿನಗಿಂತ ಸುಖಿಯಾಗಬೇಕೆಂದು ಪ್ರಯತ್ನಪಟ್ಟರೆ ನಾನು ಅಸುಖಿಯಾಗುತ್ತೇನೆ.[೬]

-ಇಲ್ಲಿ ಮನುಷ್ಯ ತನ್ನ ಅಸಹಜವಾದ ಬಯಕೆಗಳನ್ನು ಸೀಮಿತಗೊಳಿಸಿಕೊಂಡು ಮಾನಸಿಕ ನೆಮ್ಮದಿಯನ್ನು ಪಡೆಯುವುದು ಅನಿವಾರ್ಯ. ಏಕೆಂದರೆ ಇಂದಿನ ಜಗತ್ತಿನಲ್ಲಿ ಬಯಸಿದ ಎಲ್ಲಾ ಬಯಕೆಗಳು ಈಡೇರುವುದು ಅಸಾಧ್ಯದ ಸಂಗತಿ. ಯಾರು ಪ್ರಕೃತಿ ನಿಯಮಕ್ಕನುಸಾರವಾಗಿ ತನ್ನ ಮೂಲಭೂತ ಅಗತ್ಯಗಳನ್ನು ಈಡೇರಿಸಿಕೊಳ್ಳುವನೊ, ಅವನು ಮಾತ್ರ ಸುಖಿಯಾಗಿರಬಲ್ಲ ಎಂಬ ಧೋರಣೆಯು ಕಾದಂಬರಿಯಲ್ಲಿದೆ. ಇಲ್ಲಿ ಪರಿಸರವು 'ನೈಸರ್ಗಿಕಪರಿಸರ' ಎಂಬುದಕ್ಕೆ ಸೀಮಿತಗೊಂಡಿದೆ. ಮನುಷ್ಯ ನೈಸರ್ಗಿಕ ಪರಿಸರದೊಡನೆ ಹೊಂದಾಣಿಕೆ ಮಾಡಿಕೊಳ್ಳಬೇಕೆ ಹೊರತು, ಸಾಮಾಜಿಕ ಪರಿಸರದೊಂದಿಗಲ್ಲ. ಆದ್ದರಿಂದಲೇ ಕಾದಂಬರಿಗಳ ಕಥಾನಾಯಕರು ತಮ್ಮ ವ್ಯಕ್ತಿವಿಶಿಷ್ಟತೆಯನ್ನು ಸ್ಥಾಪಿಸಲು ಸಮಾಜದ ಸಾಂಪ್ರದಾಯಿಕ ಮೌಲ್ಯಗಳ ವಿರುದ್ಧ ಬಂಡೇಳುತ್ತಾರೆ. ಕುಸುಮಾಕರರು ಇತ್ತೀಚಿನ 'ಬಯಲು-ಬಸಿರು' ಕಾದಂಬರಿಯಲ್ಲಿ ನೀಡುವ ಹೊಸ ದರ್ಶನವಿದು.-

"ಸ್ವಾಮೀಜಿ ಗಾಬರಿಯಾಗಬೇಡಿ, ನಿಮಗೆ ನಾನು ಕೆಡುಕನ್ನು ಮಾಡಲು ಬಂದಿಲ್ಲ. ಈ ಸೃಷ್ಟಿಯಲ್ಲಿ ಭಗವಂತನಿಗೆ ಪ್ರತಿಸ್ಪರ್ಧಿಯಾಗಿ ದುಷ್ಟಶಕ್ತಿ ಇದೆಯೆಂದು ಎಲ್ಲರೂ ಹೇಳುತ್ತಾ ಬಂದಿದ್ದಾರೆ. ಹೌದೇನು? ನಾನು ನಿಮ್ಮ ಎದುರು ಬರುವ ಅವಶ್ಯಕತೆಯೇ ಇರಲಿಲ್ಲ. ಆದರೆ ಸೃಷ್ಟಿಯ ಕೆಡುಕಿಗೆ ನೀವು ನನ್ನನ್ನು ಪ್ರತಿಮೆಯನ್ನಾಗಿ ಮಾಡಿಕೊಂಡಿರಿ. ಅದಕ್ಕೆ ನಾನು ನನ್ನ ವಿಚಾರವನ್ನು ನಿಮ್ಮ ಮುಂದಿಡಲು ಬಂದಿದ್ದೇನೆ? ನಿಜವಾಗಿ ನೋಡಿದರೆ ಈ ಸೃಷ್ಟಿಯಲ್ಲಿ ಬದುಕಲು ನಿಮಗೆ ಎಷ್ಟು ಹಕ್ಕು ಉಂಟೋ ಅಷ್ಟೇ ಹಕ್ಕು ನಮಗೂ ಇದೆ. ನೀವು ಭಗವಂತನ ಸಂತಾನವಾದರೆ, ನಾವು ಕೂಡ ಭಗವಂತನ ಸಂತಾನವೇ ಆಗಿದ್ದೇವೆ. ದಾರಿಯಲ್ಲಿ ಮುಳ್ಳು ನಟ್ಟಿತು ಎಂದು ನೀವು ಮುಳ್ಳನ್ನು ಕೆಡಕು ಎಂದು ಭಾವಿಸುತ್ತೀರಿ. ಇದು ಅಹಂ ಕೇಂದ್ರಿತ ವಿಚಾರ ಸರಣಿಯಾಗಿದೆ. ಈ ಸೃಷ್ಟಿ ನನಗಾಗಿ ಎಂಬ ಭಾವನೆಯಿಂದ ಮಾನವ ಈ ಸೃಷ್ಟಿಯಲ್ಲಿ ತನ್ನ ಬುದ್ಧಿಯಿಂದ ದುಷ್ಟತನವನ್ನು ಮಾಡಿದ್ದಾನೆ. ಸೃಷ್ಟಿಯ ವಿಪುಲ ಸಮೃದ್ಧಿಯೆಲ್ಲ ತನ್ನದೇ ಎಂದು ಭಾವಿಸಿದ್ದಾನೆ. ನೆಲದ ಮೇಲೆ, ಕಡಲ ಮೇಲೆ, ಬಾನ ಮೇಲೆ, ತನ್ನ ಸಾಮ್ರಾಜ್ಯವನ್ನು ಸ್ಥಾಪಿಸಲು ಪ್ರಯತ್ನಿಸುತ್ತಿದ್ದಾನೆ. ತನ್ನ ದುಷ್ಟತನವನ್ನು ಇನ್ನೊಬ್ಬರ ಮೇಲೆ ಆರೋಪಿಸಿದ್ದಾನೆ. ಅವನಿಗೆ ಸೃಷ್ಟಿಯ ಜೊತೆ ಸಹಬಾಳ್ವೆ ಅರ್ಥವಾಗುತ್ತಿಲ್ಲ. ಹೇಳಿ, ನಿಮ್ಮ ಉತ್ತರ ಏನು ಇದಕ್ಕೆ?

ನಿಮಗೆ ಬಾಳುವುದು ಗೊತ್ತಿಲ್ಲ, ಸಾಯುವುದು ಮಾತ್ರ ಗೊತ್ತಿದೆ : ಆದರೆ ಸಾಯಲು ಹೆದರುತ್ತೀರಿ. ಕೊಲ್ಲಲು ಗೊತ್ತಿದೆ."[೭]

ಒಮ್ಮೆ ಅನಿಕೇತಾನಂದ ಆಶ್ರಮದಲ್ಲಿ ಚಿಂತನೆ ಮಾಡುತ್ತಾ ಕುಳಿತಿದ್ದಾಗ, ಅವನ ಮನದಲ್ಲಿ ಹಳವಂಡಗಳು ಬೀಳುತ್ತವೆ. ಅದರಲ್ಲಿ ಒಂದು ಹಾವಿನದು. ಆ ಹಾವು ಬಂದು ಅನಿಕೇತಾನಂದನೊಡನೆ ಈ ಮೇಲಿನ ರೀತಿಯಲ್ಲಿ ಮಾತನಾಡುತ್ತದೆ. ಹಾವಿನ ಈ ಮಾತುಗಳು ಪರಿಸರವಾದಿಯೊಬ್ಬ ಜೀವ ಸಮುದಾಯದ ಪರವಾಗಿ ಹೂಡಿದ ವಾದದಂತಿದೆ. ಇಲ್ಲಿ ಕಾದಂಬರಿಯು ಆಧುನಿಕತೆ, ಅಭಿವೃದ್ಧಿಯ

ಹೆಸರಿನಲ್ಲಿ ಮಾನವನು ಪರಿಸರದಲ್ಲಿ ಮಾಡುತ್ತಿರುವ ಅಕೃತ್ಯವನ್ನು ಖಂಡಿಸಿದೆ. ಇಡೀ ಪ್ರಕೃತಿಯು ಇರುವುದು ಮನುಷ್ಯನ ಒಳಿತಿಗಾಗಿ, ಅನುಭೋಗಕ್ಕಾಗಿ ಎಂಬ ಮಾನವ ಕೇಂದ್ರಿತ ವಿಚಾರ ಸರಣಿಯು ಕಾದಂಬರಿಯಲ್ಲಿ ಟೀಕೆಗೆ ಒಳಗಾಗಿದೆ. ಮನುಷ್ಯನು ಸೃಷ್ಟಿಯಲ್ಲಿಗುವ ಜೀವ ಸಮುದಾಯದಲ್ಲಿನ ಒಂದು ಜೀವಿ ಮಾತ್ರ. ಪ್ರಾಕೃತಿಕವಾಗಿ ಇದರಿಂದಾಚೆಗೆ ಯಾವ ಮಹತ್ವವೂ ಮನುಷ್ಯನಿಗಿಲ್ಲ. ಆದರೆ ಮಾನವನು ತನ್ನ ಸ್ವಾರ್ಥದಿಂದ ತನ್ನನ್ನು ಸೃಷ್ಟಿಯ ಕೇಂದ್ರವನ್ನಾಗಿ ಮಾಡಿಕೊಂಡು ಇತರ ಜೀವಸಮುದಾಯವನ್ನು ಕಡೆಗಣಿಸಿದ್ದಾನೆ. ತನ್ನ ಹಿತಾಸಕ್ತಿಯ ನೆಪದಲ್ಲಿ ಇತರ ಜೀವರಾಶಿಯನ್ನು, ಪರಿಸರವನ್ನು ನಾಶಮಾಡುತ್ತಿದ್ದಾನೆ. ಇವನು ಪ್ರಕೃತಿಯಿಂದ ಪ್ರತ್ಯೇಕವೇ?, ಪ್ರಕೃತಿಯಿಂದ ಪ್ರತ್ಯೇಕವಾದ ಮಾನವನನ್ನು ಕಲ್ಪಿಸಿಕೊಳ್ಳುವುದು ಸಾಧ್ಯವಿಲ್ಲ. ಒಂದೆಡೆ ನಾಶವಾಗುತ್ತಿರುವ ಜೀವಸಮುದಾಯವು ಅಷ್ಟಕ್ಕೆ ಸೀಮಿತವಾಗದೆ, ಪರೋಕ್ಷವಾಗಿ ಮಾನವನ ಅಂತ್ಯವು ಅದರೊಂದಿಗೆ ಆಗುತ್ತಿರುತ್ತದೆ. ಜೀವ ಪರಿಸರದಲ್ಲಿನ ಅಸಮತೋಲನವು ಇಡೀ ಜೀವಸಮುದಾಯಕ್ಕೆ ಅಪಾಯಕಾರಿಯಾಗಿರುತ್ತದೆ. ಇತರ ಜೀವ ಸಮುದಾಯದ ಅಂತ್ಯದ ನಂತರ ಮನುಷ್ಯನು ಬದುಕಿದ್ದು ಸತ್ತಂತೆಯೇ. ಈಗ ಸೃಷ್ಟಿಯಲ್ಲಿ ಉದ್ಭವಿಸಿರುವ ಎಲ್ಲಾ ಬಗೆಯ ಅಸಮತೋಲನಗಳು ಮಾನವನ ಕುಕೃತ್ಯದ ಪರಿಣಾಮವಲ್ಲದೆ ಬೇರೆ ಅಲ್ಲ. ಮನುಷ್ಯನು ತನ್ನಷ್ಟೆ ಪ್ರಾಮುಖ್ಯತೆಯನ್ನು ಇತರ ಜೀವಿಗಳಿಗೆ ನೀಡಬೇಕು. ಸೃಷ್ಟಿಯಲ್ಲಿ ಅವುಗಳಿಗೂ ಮಾನವನಿಗಿರುವಷ್ಟೆ ಸ್ಥಾನಮಾನಗಳು ಇವೆ. ಅವುಗಳ ಬದುಕಿನ ಹಕ್ಕನ್ನು ಗೌರವಿಸಬೇಕೆಂಬ ಹೊಸ ದರ್ಶನವನ್ನು ಕಾದಂಬರಿಯು ಇಲ್ಲಿ ನೀಡುವುದರ ಜೊತೆಗೆ 'ಆಧುನಿಕ ಮಾನವತಾ ವಾದ'ವನ್ನು ತಿರಸ್ಕರಿಸಿ 'ಜೀವಕೇಂದ್ರಿತಪರಿಸರವಾದ'ವನ್ನು ಸಮರ್ಥಿಸಿದೆ.

ಇಲ್ಲಿ ಕುಸುಮಾಕರರು ನೀಡಿರುವ ದರ್ಶನವು ಹೊಸದೇ? ಇದಕ್ಕಿಂತ ಮುಂಚೆ ಇದನ್ನು ಯಾರು ಪ್ರತಿಪಾದಿಸಿರಲಿಲ್ಲವೇ? ಎಂಬ ಪ್ರಶ್ನೆಗಳು ಏಳುತ್ತವೆ. ನಮ್ಮ ಪೂರ್ವಜರು ಮನುಷ್ಯ ಮತ್ತು ಪ್ರಕೃತಿ-ಜೀವ ಸಮುದಾಯದ ನಡುವಿನ ಸಂಬಂಧವನ್ನು ಚೆನ್ನಾಗಿ ಮನಗಂಡಿದ್ದರು. ಅದನ್ನು ಅವರು ದಿನನಿತ್ಯದ ಬದುಕಿನ ಆಚರಣೆಗಳಾಗಿ ಅಳವಡಿಸಿಕೊಂಡಿದ್ದರಿಂದ 'ಜೀವ ಕೇಂದ್ರಿತ ಪರಿಸರವಾದ'ವನ್ನು ಒಂದು ಪ್ರತ್ಯೇಕ ಸಿದ್ಧಾಂತ ವನ್ನಾಗಿ ಮಾಡುವ ಅಗತ್ಯವಿರಲಿಲ್ಲ. ಅದು ಅವರಿಗೆ ಬದುಕಿನ ಒಂದು ಭಾಗವಾಗಿತ್ತು. ಅನಂತರ ಬಂದ ಜೈನಧರ್ಮ ಮತ್ತು ಬೌದ್ಧಧರ್ಮಗಳು ಇದಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿ ಅಹಿಂಸೆಯನ್ನು ಧರ್ಮದ ಮುಖ್ಯ ಅಂಗವನ್ನಾಗಿ ಮಾಡಿಕೊಂಡವು. ಆದರೆ ಹದಿನೆಂಟನೇ ಶತಮಾನದಿಂದೀಚೆಗೆ ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿನ ಪ್ರಗತಿಯು ಮಾನವ ಮತ್ತು ಜೀವ ಸಮುದಾಯದ ನಡುವೆ ಕಂದಕವನ್ನು ಸೃಷ್ಟಿಸಿತು. ಇಂದು 'ಜೀವಕೇಂದ್ರಿತ ಪರಿಸರವಾದ'ವು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿರುವುದರಿಂದ ಸೈದ್ಧಾಂತಿಕ ನೆಲೆಗಟ್ಟನ್ನು ಪಡೆದುಕೊಂಡಿದೆ. ಕುಸುಮಾಕರರು ಈ ಕಾದಂಬರಿಯಲ್ಲಿ ಗತಕಾಲದಲ್ಲಿ ಚಾಲ್ತಿಯಲ್ಲಿದ್ದು ಆಧುನಿಕ ಕಾಲದಲ್ಲಿ ಕಣ್ಮರೆಯಾಗುತ್ತಿರುವ, ಮಾನವನ ಜೀವನಕ್ಕೆ ಅತ್ಯಗತ್ಯವಾಗಿರುವ 'ಜೀವಕೇಂದ್ರಿತ ಪರಿಸರವಾದ'ವನ್ನು ಹೆಕ್ಕಿ ತೆಗೆದಿದ್ದಾರೆ. ನವ್ಯ ಸಾಹಿತ್ಯವು ಮಾನವ ಕೇಂದ್ರಿತವಾಗಿದ್ದು, ಕಾಮ, ಅಸ್ತಿತ್ವವಾದ, ವ್ಯಕ್ತಿವಿಶಿಷ್ಟತೆಯನ್ನು ಪ್ರಧಾನವಾಗಿ ಒಳಗೊಂಡಿದೆ. ಕುಸುಮಾಕರರು ನವ್ಯ ಬರಹಗಾರರಾಗಿಯೂ

ಮನುಷ್ಯಕೇಂದ್ರದಿಂದ ತಮ್ಮ ಆಲೋಚನೆಯನ್ನು ಜೀವಕೇಂದ್ರದೆಡೆಗೆ ಹರಿಸಿದ್ದಾರೆ. ನವ್ಯ ಸಾಹಿತ್ಯವು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತಾ ಹೋದಂತೆ ನವ್ಯಸಾಹಿತಿಗಳು ವ್ಯಕ್ತಿಯಿಂದ ಸಮುದಾಯದತ್ತ ಹೊರಳಿ ಬರೆಯಲಾರಂಭಿಸಿದರು. ಆದರೆ ಕುಸುಮಾಕರರ ನಿಲುವು ವ್ಯಕ್ತಿಯಿಂದ ಜೀವಸಮುದಾಯದೆಡೆಗೆ ಹೊರಳಿರುವುದು ವಿಶಿಷ್ಟವಾಗಿ ಕಾಣುತ್ತದೆ.

ಆದರೆ 'ಬಯಲು-ಬಸಿರು' ಕಾದಂಬರಿಯಲ್ಲಿ ಏಕವ್ಯಕ್ತಿಕೇಂದ್ರಿತ ಚಿಂತನೆಯು ಇಡೀ ಕಾದಂಬರಿಯನ್ನು ವ್ಯಾಪಿಸಿಕೊಂಡಿದೆ. ಕಾದಂಬರಿಯು ಒಂದು ರೀತಿಯಲ್ಲಿ ವ್ಯಕ್ತಿಯೊಬ್ಬನ ಸ್ವಗತದಂತೆ ಮೂಡಿಬಂದಿದೆ. ಕಾದಂಬರಿಯಲ್ಲಿನ ಅತಿಯಾದ ದಾರ್ಶನಿಕತೆಯ ಹುಡುಕಾಟದಿಂದ ಕಥೆಯು ದುರ್ಬಲವಾಗಿದೆ.

ಒಟ್ಟಾರೆ ಇವರ ಎಲ್ಲಾ ಕಾದಂಬರಿಗಳನ್ನು ಅಧ್ಯಯನ ಮಾಡಿದಾಗ ಕುಸುಮಾಕರರು ಒಬ್ಬ ದಾರ್ಶನಿಕ ಬರಹಗಾರರು ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ.

**ಟಿಪ್ಪಣಿಗಳು**

೧. ರಹಮತ್ ತರೀಕೆರೆ, **'ಜಾಗತೀಕರಣಕ್ಕೆ ಪ್ರತಿಕ್ರಿಯೆಯಾಗಿ'?** ಪು.೧೬

೨. **ಕುಸುಮಾರಕರ ದೇವರಗೆಣ್ಣೂರು, 'ಪರಿಘು',** ಪು.೧೩೪

೩. ಅದೇ, ಪು.೧೮೦

೪. ಅದೇ, **'ನಿರಿಂದ್ರಿಯ'** ಪು.೧೮೨

೫. ಅದೇ, **'ಪರಿಘು',** ಪು.೧೪೦

೬. ಅದೇ, ಪು.೧೪೮

೭. ಅದೇ, **'ಬಯಲು-ಬಸಿರು',** ಪು.೧೨೩-೧೨೪

೬

# ಉಪಸಂಹಾರ

ಕುಸುಮಾಕರರ ಕಾದಂಬರಿಗಳನ್ನು ಪ್ರಮುಖವಾದ ನಾಲ್ಕು ಆಶಯಗಳ ಅಡಿಯಲ್ಲಿ ವಿಶ್ಲೇಷಿಸಲಾಯಿತು. ಅವರ ಕಾದಂಬರಿಗಳ ಈ ತನಕದ ವಿಶ್ಲೇಷಣೆಯಲ್ಲಿ ಕಂಡುಬಂದ ಮುಖ್ಯವಾದ ನೋಟಗಳು ಇವು :

೧. ತಲೆಮಾರು ಸಂಘರ್ಷವು ಕುಟುಂಬದಲ್ಲಿ ಮತ್ತು ಕುಟುಂಬದ ಹೊರಗಡೆ ವಿಭಿನ್ನ ವಯೋಮಾನದವರ ನಡುವೆ ನಡೆಯುವ ಒಂದು ತಾತ್ವಿಕ ಜಗಳ. ಆಧುನಿಕತೆ, ವಿಚಾರವಾದದ ಸಂಪರ್ಕ ಮತ್ತು ವ್ಯಕ್ತಿವಿಶಿಷ್ಟತಾ ಮೌಲ್ಯಗಳ ಪರಿಣಾಮವಾಗಿ ತಲೆಮಾರು ಸಂಘರ್ಷವು ಉಂಟಾಗುತ್ತದೆ. ಮತ್ತೊಂದು ರೀತಿಯಲ್ಲಿ ಇದು ಸಾಂಪ್ರದಾಯಿಕ ಮತ್ತು ಆಧುನಿಕ ಮೌಲ್ಯಗಳ ನಡುವಿನ ಸಂಘರ್ಷ. ಕುಟುಂಬದಲ್ಲಿ ಹಿರಿಯ ಮತ್ತು ಕಿರಿಯ ತಲೆಮಾರಿನ ಜನರ ನಡುವೆ ಇದು ನಡೆಯುತ್ತದೆ.

೨. ವಿವಿಧ ಕಾರಣಗಳ ಹಿನ್ನೆಲೆಯಲ್ಲಿ ತಲೆಮಾರು ಸಂಘರ್ಷವನ್ನು ಒಂದು ಮತ್ತು ಎರಡನೇ ತಲೆಮಾರು ಸಂಘರ್ಷಗಳು, ಕೌಟುಂಬಿಕ ಮತ್ತು ಸಾರ್ವಜನಿಕ ಬದುಕಿನ ತಲೆಮಾರು ಸಂಘರ್ಷಗಳು ಇತ್ಯಾದಿಯಾಗಿ ವಿಭಾಗ ಕ್ರಮ ಮಾಡಬಹುದು. ಕುಟುಂಬದಲ್ಲಿ ಹೆಚ್ಚಿನ ಅಧಿಕಾರವು ತಂದೆಯಲ್ಲಿ ಕೇಂದ್ರೀಕೃತಗೊಂಡಿರುವುದರಿಂದ ತಂದೆ ಮತ್ತು ಮಗನಲ್ಲಿ ತಲೆಮಾರು ಸಂಘರ್ಷವು ತೀವ್ರವಾಗಿ ನಡೆಯುತ್ತದೆ.

೩. ತಲೆಮಾರು ಸಂಘರ್ಷವು ಸಾಮಾಜಿಕ ವಾಸ್ತವವಾಗಿರುವುದರಿಂದ ಕುಸುಮಾಕರರ ಕಾದಂಬರಿಗಳಲ್ಲಿ ಪ್ರಧಾನ ಆಶಯವಾಗಿ ಮೂಡಿಬಂದಿದೆ. ಕುಸುಮಾಕರರ ಕಾದಂಬರಿಗಳಲ್ಲಿ ತಲೆಮಾರು ಸಂಘರ್ಷವು ವೈವಿಧ್ಯವನ್ನು ಪಡೆದುಕೊಂಡಿದೆ. ಹಲವು ಬಗೆಯ ವಿಭಿನ್ನ ಸ್ವರೂಪದ ತಲೆಮಾರು ಸಂಘರ್ಷಗಳು ಕಾದಂಬರಿಗಳಲ್ಲಿ ಚಿತ್ರಣಗೊಂಡಿವೆ.

೪. ವ್ಯಕ್ತಿವಿಶಿಷ್ಟತೆಯು ನಿಸರ್ಗ ಸಹಜವಾದುದು. ಪ್ರತಿಯೊಂದು ಜೀವಿಯಲ್ಲಿಯೂ ಇದನ್ನು ಕಾಣಬಹುದು. ಮನುಷ್ಯನ ಉಗಮದೊಂದಿಗೆ ವ್ಯಕ್ತಿವಿಶಿಷ್ಟತೆಯು ಆವಿರ್ಭವಿಸಿದೆ. ಅನುವಂಶೀಯತೆ ಮತ್ತು ಪರಿಸರಗಳ ಪ್ರಭಾವದ ಸಂಯೋಜನೆಯಿಂದ ವ್ಯಕ್ತಿ ವಿಶಿಷ್ಟತೆ ಉಂಟಾಗುತ್ತದೆ. ಜೈವಿಕ ನೆಲೆಯ ದೃಷ್ಟಿಕೋನ. ಆದರೆ ವ್ಯಕ್ತಿ ವಿಶಿಷ್ಟತೆಯು ಕುಸುಮಾಕರರಲ್ಲಿ ಒಂದು ಸಮಾಜಶಾಸ್ತ್ರೀಯ ಹಿನ್ನೆಲೆಯಲ್ಲಿ ಸೈದ್ಧಾಂತಿಕ ನೆಲೆಗಟ್ಟನ್ನು ಪಡೆದುಕೊಂಡಿದೆ. ಕುಸುಮಾಕರರ ಕಾದಂಬರಿಗಳಲ್ಲಿ ವ್ಯಕ್ತಿವಿಶಿಷ್ಟತೆಯ ಮೇಲೆ ನಗರ ಪರಿಸರದ ಪ್ರಭಾವ ಹೆಚ್ಚು. ವ್ಯಕ್ತಿ ವಿಶಿಷ್ಟತೆಯ ಮೇಲೆ ಆಧುನಿಕತೆ, ವಿಚಾರವಾದ, ಮನಃಶಾಸ್ತ್ರೀಯ ಸಿದ್ಧಾಂತಗಳ ಹಿನ್ನೆಲೆಯು ಕುಸುಮಾಕರರ ಕಾದಂಬರಿಗಳಲ್ಲಿ ಬಂದಿದೆ. ಮನಃಶಾಸ್ತ್ರೀಯ ಪರಿಕಲ್ಪನೆಗಳು,

ಕನಸು ಹಳವಂಡಗಳು, ಭಾಷೆ, ಗಾದೆ, ಪ್ರತಿಮೆಗಳು, ನಿರೂಪಣೆ ಇವೆಲ್ಲವೂ ಕುಸುಮಾಕರರ ಕಾದಂಬರಿಗಳಲ್ಲಿ ವ್ಯಕ್ತಿವಿಶಿಷ್ಟತೆಯ ಚಿತ್ರಣಕ್ಕೆ ಪೂರಕವಾಗಿವೆ.

೫. ಅಸ್ತಿತ್ವವಾದ, ಅಸಂಗತವಾದ, ವ್ಯಕ್ತಿ ವಿಶಿಷ್ಟವಾದ, ಮನಃಶಾಸ್ತ್ರೀಯ ಸಿದ್ಧಾಂತಗಳು ನವ್ಯ ಸಾಹಿತ್ಯಕ್ಕೆ ಪ್ರೇರಣೆ ನೀಡಿದವು.

೬. ನವ್ಯ ಸಾಹಿತ್ಯವು ಎಷ್ಟೇ ಆದರೂ ಒಟ್ಟು ಮಾನವನ ಮೂಲಭೂತ ಅವಸ್ಥೆಯ ಬಗ್ಗೆ ಚಿಂತಿಸಿದರೂ, ವಿವರಗಳಲ್ಲಿ ಅದು ಪುರುಷ ಪ್ರಧಾನವಾದುದು. ನವ್ಯದಲ್ಲಿ ಮಹಿಳಾ ಸಾಹಿತಿಗಳು ಬಾರದೆ ಇದ್ದುದು, ಪುರುಷ ಸಾಹಿತಿಗಳೇ ಹೆಚ್ಚಾಗಿದ್ದುದು ಇದಕ್ಕೆ ಪೂರಕವಾಗಿದೆ. ನವ್ಯರು ಮನುಷ್ಯನ ಮೂಲಭೂತ ಪ್ರವೃತ್ತಿಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಿದ ಕಾರಣ ಗಂಡು-ಹೆಣ್ಣಿನ ಸಂಬಂಧಗಳನ್ನು ಹೆಚ್ಚಾಗಿ ಸಾಹಿತ್ಯ ಕೃತಿಗಳಲ್ಲಿ ತಂದರು.

೭. ಕುಸುಮಾಕರರು ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧಗಳನ್ನು ಸಾಕಷ್ಟು ಚಿತ್ರಿಸಿದ್ದಾರೆ. ಕೆಲವು ಕಡೆ ಕಾಮದಿಂದಾಚೆಗಿನ ಅಲೌಕಿಕ ಸುಖದೆಡೆಗೆ ಕಾದಂಬರಿಗಳು ಅನ್ವೇಷಣೆಯಲ್ಲಿ ತೊಡಗುತ್ತವೆ. ಕುಸುಮಾಕರರ ಕಾದಂಬರಿಗಳಲ್ಲಿ ವೈವಾಹಿಕ ಬದುಕಿನಲ್ಲಿಯ ಬಿರುಕು ಹೆಚ್ಚಾಗಿ ಬಂದಿದೆ. ಬಿರುಕಿಗೆ ಅಹಂಕೇಂದ್ರಿತ ಮನುಷ್ಯಪ್ರಜ್ಞೆ, ವ್ಯಕ್ತಿವಿಶಿಷ್ಟತೆ, ಅಸ್ತಿತ್ವವಾದದ ಹಿನ್ನೆಲೆಯಿದೆ. ಗಂಡು-ಹೆಣ್ಣಿನ ಆಕರ್ಷಣೆಯ ಹಿಂದೆ ಮನುಷ್ಯನ ಮೂಲಭೂತ ಪ್ರವೃತ್ತಿ, ಪರಿಸರ ಮತ್ತು ಭೌತಿಕ ಸಾಮೀಪ್ಯಗಳು ತಳುಕು ಹಾಕಿಕೊಂಡಿವೆ. ಕಾದಂಬರಿಗಳಲ್ಲಿ ಕಾಮಕ್ಕೆ ವಿಶೇಷ ಪ್ರಾಧಾನ್ಯತೆ ಇದೆ. ಇದು ವ್ಯಕ್ತಿಯ ಬದುಕನ್ನು ನಿಯಂತ್ರಿಸುವ, ರೂಪಿಸುವ, ಮುನ್ನಡೆಸುವ ಅಂಶವಾಗಿ ಕಂಡುಬರುತ್ತದೆ.

೮. ಶಾಂತಿನಾಥ ದೇಸಾಯಿಯವರನ್ನು ಹೊರತುಪಡಿಸಿದರೆ ನವ್ಯ ಸಾಹಿತ್ಯದಲ್ಲಿ ವಿಶಿಷ್ಟತೆ ಕುಸುಮಾಕರರಿಗಿದೆ. ಏಕೆಂದರೆ ಪುರುಷ ಪ್ರಧಾನತೆಯ ನಡುವೆಯೂ, 'ನಿರಿಂದ್ರಿಯ' ಕಾದಂಬರಿಯಲ್ಲಿ ಸ್ತ್ರೀ ಸಂವೇದನೆಗಳನ್ನು ಚಿತ್ರಿಸಲು ಯತ್ನಿಸಿದ್ದಾರೆ. ಕಾಮವನ್ನು ಕೇವಲ ದೈಹಿಕ ತೃಪ್ತಿಗೆ ಸೀಮಿತಗೊಳಿಸದೆ, ಅದರಿಂದಾಚೆಗಿನ ತಾತ್ವಿಕ, ಆಧ್ಯಾತ್ಮಿಕ ಸೆಳೆತಗಳ ಕಡೆಗೆ ಕಾದಂಬರಿಗಳು ಒಲವು ತೋರುತ್ತವೆ. ಹೆಂಡತಿಯ ಪ್ರೀತಿಯಲ್ಲಿ ಮಾತೃವಾತ್ಸಲ್ಯವನ್ನು ಕೆಲವು ಕಾದಂಬರಿಗಳಲ್ಲಿ ಕಾಣುತ್ತೇವೆ.

೯. ದಾರ್ಶನಿಕತೆಯು ಒಂದು ರೀತಿಯ ಲೋಕದೃಷ್ಟಿ, ಜೀವನದೃಷ್ಟಿಕೋನ. ಇದೊಂದು ಬಗೆಯ ತಾತ್ವಿಕ-ಅನ್ವೇಷಣೆ. ಚಿಂತನೆಯು ಇಲ್ಲಿ ಪ್ರಧಾನ. ಕುಸುಮಾಕರರು ವ್ಯಕ್ತಿಕೇಂದ್ರಿತ, ಚಿಂತನಶೀಲ, ಜಿಜ್ಞಾಸು, ದಾರ್ಶನಿಕ ಬರಹಗಾರರು. ಹೊಸ ಮೌಲ್ಯಗಳ ಅನ್ವೇಷಣೆ ಇವರ ಕಾದಂಬರಿಗಳ ಕೇಂದ್ರಬಿಂದು. ಮನುಷ್ಯನು ಎಲ್ಲಿಯವರೆಗೆ ತಾನು ನಿರ್ಮಿಸಿಕೊಂಡಿರುವ ಪರಿಘವನ್ನು ಉಲ್ಲಂಘಿಸಿ ಬರುವುದಿಲ್ಲವೋ ಅಲ್ಲಿಯವರೆಗೆ ಅವನಿಗೆ ಜೀವನದಲ್ಲಿ ಆನಂದ ದೊರೆಯುವುದಿಲ್ಲ. ಮನುಷ್ಯನಿಗೆ ಯಾವುದರ ಕೊರತೆಯಿದೆಯೋ, ಅದು ಅತಿ ಅಗತ್ಯವಾಗಿ ಕಾಣುತ್ತದೆ. ಅದರತ್ತ ಅವನ ಆಕರ್ಷಣೆಯಿದೆ. ಮನುಷ್ಯನ ಬದುಕನ್ನು ರೂಪಿಸುವಲ್ಲಿ ಬಾಲ್ಯ ಅತ್ಯಂತ ಮಹತ್ವವಾದುದು. ಯಾವುದೇ ಬಂಧನದಿಂದ ಕಳಚಿಕೊಂಡರೂ

ಮತ್ತೊಂದು ಬಗೆಯ ಬಂಧನಗಳಿಗೆ ಮನುಷ್ಯ ಒಳಗಾಗುತ್ತಾನೆ. ವ್ಯಕ್ತಿಯು ತನ್ನ ಆಂತರಿಕ ಬೆಳವಣಿಗೆಯನ್ನು ಗುರ್ತಿಸುವುದು ಕಷ್ಟ ಸಾಧ್ಯ. ಅದು ಅಮೂರ್ತ ಸ್ವರೂಪದ್ದು. ಅದನ್ನು ತಿಳಿಯಲು ಪ್ರಯತ್ನಿಸುವ ವ್ಯಕ್ತಿ ಗೊಂದಲಕ್ಕೀಡಾಗುತ್ತಾನೆ. ವ್ಯಕ್ತಿಗೆ ತನಗೆ ಬೇಕಾದುದು ಏನೆಂದು ತಿಳಿಯುವುದರಿಂದ ಮತ್ತು ನಿಷ್ಪಕ್ಷಪಾತವಾದ ಆತ್ಮಾವಲೋಕನದಿಂದ ಮಾನಸಿಕ ನೆಮ್ಮದಿಯನ್ನು ಪಡೆಯಬಹುದು.

೧೦. ಕುಸುಮಾಕರರ 'ಬಯಲು-ಬಸಿರು' ಕಾದಂಬರಿಯು ಮಾನವತಾವಾದಕ್ಕೆ ವಿರುದ್ಧವಾಗಿ ಜೀವಕೇಂದ್ರಿತ ಪರಿಸರವಾದವನ್ನು ತಂದಿದೆ. ಮನುಷ್ಯನಂತೆಯೇ ಪ್ರಕೃತಿಯಲ್ಲಿನ ಜೀವ ಸಮುದಾಯಕ್ಕೆ ಬದುಕುವ ಹಕ್ಕಿದೆ. ಆದ್ದರಿಂದ ಮನುಷ್ಯ ಜೀವಸಮುದಾಯದ ಬದುಕುವ ಹಕ್ಕನ್ನು ಗೌರವಿಸಿ, ಪ್ರಕೃತಿಯಲ್ಲಿನ ಒಂದು ಜೀವಿಯಾಗಿ, ಅದರೊಡನೆ ಹೊಂದಾಣಿಕೆ ಮಾಡಿಕೊಂಡು ಬದುಕಬೇಕು ಎಂಬ ದರ್ಶನ ಈ ಕಾದಂಬರಿಯಲ್ಲಿ ಬಂದಿದೆ.

೧೧. ಕುಸುಮಾಕರರ ಕಾದಂಬರಿಗಳು ವ್ಯಕ್ತಿ ಕೇಂದ್ರಿತವಾದವು. ಇವರ ಎಲ್ಲಾ ಕಾದಂಬರಿಗಳಲ್ಲಿಯು ನಾಯಕನಿಗೆ ಪ್ರಾಧಾನ್ಯತೆಯಿದೆ. ಅವನ ಅನುಭವಗಳು, ಚಿಂತನೆಗಳನ್ನು ಕಾದಂಬರಿಕಾರರು ಕಟ್ಟಿಕೊಡುತ್ತಾರೆ. ಆದರೆ ಕಾದಂಬರಿಗಳಲ್ಲಿನ ಇತರ ಪಾತ್ರಗಳು ಅಗಣ್ಯವಾಗಿ ಬಿಡುತ್ತವೆ. ಕಾದಂಬರಿಗಳಲ್ಲಿ ಇವು ಸನ್ನಿವೇಶಕ್ಕೆ ಒಂದೆರಡು ಬಾರಿ ಬಂದು ಕಣ್ಮರೆಯಾಗುತ್ತವೆ. ಪಾತ್ರಗಳತ್ತ ಕಾದಂಬರಿಕಾರರ ದೃಷ್ಟಿಯು ಹರಿಯುವುದಿಲ್ಲ. ಕಾದಂಬರಿಗಳ ಓದುಗರಿಗೆ ಇವು ಅಪೂರ್ಣ ಪಾತ್ರಗಳಾಗಿಯೇ ಉಳಿಯುತ್ತವೆ. ಅವು ಓದುಗರೆದುರು ತಮ್ಮ ಅಂತರಂಗವನ್ನು ಬಿಚ್ಚಿಡುವುದಿಲ್ಲ. ಕಾದಂಬರಿಕಾರರ ಈ ನಾಯಕ ಕೇಂದ್ರಿತ ದೃಷ್ಟಿಕೋನವು ಓದುಗರಿಗೆ ಒಂದು ರೀತಿಯ ಕಿರಿಕಿರಿಯನ್ನುಂಟು ಮಾಡುತ್ತದೆ. ಇದು ಕಾದಂಬರಿಕಾರರ ಒಂದು ಮಿತಿಯೂ ಹೌದು.

'ನಾಲ್ಕನೆಯ ಆಯಾಮ' ಕಾದಂಬರಿಯಲ್ಲಿ ಕಾದಂಬರಿಕಾರರು ನಾಯಕನ ಹೆಸರನ್ನು ಪ್ರಸ್ತಾಪಿಸದೆ ಸರ್ವನಾಮಗಳನ್ನು ಬಳಸುತ್ತಾರೆ. ಆದರೆ ಒಂದೆಡೆ ಅವನ ಹೆಸರನ್ನು ವಿಶೇಷ ಸಂದರ್ಭದಲ್ಲಿ ಪ್ರಸ್ತಾಪಿಸಿದರೂ, ಅದು ಓದುಗರ ಗಮನವನ್ನು ಸೆಳೆಯುವುದಿಲ್ಲ. ಕಾದಂಬರಿಯನ್ನು ಓದಿದ ತರುವಾಯ ನಾಯಕನ ಹೆಸರೇನೆಂದು ಕೇಳಿದರೆ ಅವನಿಗೆ ಹೆಸರಿಲ್ಲವೆಂದು ಉತ್ತರಿಸುತ್ತಾರೆ. ಕಾದಂಬರಿಯಲ್ಲಿ ಬಳಸಿಕೊಂಡಿರುವ ಈ ವಿಶೇಷ ತಂತ್ರವು ಓದುಗರನ್ನು ತಲುಪದೆ ವಿಫಲವಾಗುತ್ತದೆ.

ಕುಸುಮಾಕರರ ಕಾದಂಬರಿಗಳಲ್ಲಿ ಅಲ್ಲಲ್ಲಿ ಬಳಕೆಗೊಂಡಿರುವ ಪ್ರತಿಮೆಗಳು ನಾಯಕರು ಕಾಣುವ ಕನಸುಗಳು, ಭ್ರಮೆಗಳು, ಸೂಕ್ಷ್ಮ ಓದನ್ನು ಬೇಡುತ್ತವೆ. ಅಧ್ಯಯನದ ಸಂದರ್ಭದಲ್ಲಿ ಮರು ಓದುಗಳನ್ನು ಮಾಡುವುದರ ಮೂಲಕ ಈ ತೊಡಕುಗಳು ಬಗೆಹರಿದವು.

ಕಾದಂಬರಿಕಾರರು ತಮ್ಮ ಕಾದಂಬರಿಗಳಲ್ಲಿ ಮನೋವಿಶ್ಲೇಷಣೆಯ ಸಂದರ್ಭದಲ್ಲಿ ಕೆಲವು ಕಡೆ ಪಾತ್ರಗಳ ಬಾಹ್ಯ ಚಟುವಟಿಕೆಯನ್ನು ನಿರೂಪಿಸುವರು. ಇದು ಪಾತ್ರಗಳ ಮನಸ್ಸಿನ ಸ್ಥಿತಿಯನ್ನು ತಿಳಿಯುವಲ್ಲಿ

ಸಹಕಾರಿಯಾಗುವುದಿಲ್ಲ. ಪ್ರಸ್ತುತ ಅಧ್ಯಯನವು ಪರಿಕಲ್ಪನೆಗಳಿಗೆ ಸೀಮಿತವಾಗಿ ನಡೆದಿರುವುದರಿಂದ ವಿಮರ್ಶಕರ ಅಭಿಪ್ರಾಯಗಳನ್ನು ನಿಬಂಧದಲ್ಲಿ ಹೆಚ್ಚು ಬಳಸಿಕೊಳ್ಳಲಾಗಿಲ್ಲ. ಇಂತಹ ತೊಡಕುಗಳು ಅಧ್ಯಯನದ ಸಂದರ್ಭದಲ್ಲಿ ಎದುರಾದವು.

ಪ್ರಸ್ತುತ ಅಧ್ಯಯನ ಹೊರತಾಗಿ ಇನ್ನು ಬೇರೆ ಬೇರೆ ಮಾದರಿಗಳಲ್ಲಿ, ಆಶಯ, ಪರಿಕಲ್ಪನೆಗಳಡಿಯಲ್ಲಿ ಕುಸುಮಾಕರರ ಕಾದಂಬರಿಗಳನ್ನು ಅಧ್ಯಯನ ಮಾಡಬಹುದು. ಕುಸುಮಾಕರರ ಕಾದಂಬರಿಗಳಲ್ಲಿ ನಗರ ಪ್ರಜ್ಞೆಯ ಸ್ವರೂಪವನ್ನು ಕುರಿತು ಅಧ್ಯಯನ ಮಾಡುವ ಸಾಧ್ಯತೆಯಿದೆ. ಕುಸುಮಾಕರರು ತಮ್ಮ ಕಾದಂಬರಿಗಳಲ್ಲಿ ಮನೋವಿಶ್ಲೇಷಣೆಯನ್ನು ಹೇಗೆ ಮಾಡಿದ್ದಾರೆ ಅದರ ಸ್ವರೂಪವನ್ನು ಕುರಿತು ಚರ್ಚಿಸಬಹುದಾಗಿದೆ. ಇವರ ಕಾದಂಬರಿಗಳಲ್ಲಿ ಸ್ತ್ರೀ ಸಂವೇದನೆಯು ಹೇಗೆ ಪ್ರಕಟಗೊಂಡಿದೆ ಎಂಬುದನ್ನು ಕುರಿತು ಅಧ್ಯಯನ ಮಾಡಬಹುದು. ಮತ್ತೊಬ್ಬ ನವ್ಯಸಾಹಿತಿಯೊಡನೆ ಕುಸುಮಾಕರನನ್ನು ತೌಲನಿಕವಾಗಿ ಅಧ್ಯಯನ ಮಾಡಬಹುದಾಗಿದೆ. ಅಥವಾ ನವ್ಯ ಕಾದಂಬರಿಯೊಡನೆ ಕುಸುಮಾಕರರ ಒಂದು ಕಾದಂಬರಿಯನ್ನು ತೌಲನಿಕ ಅಧ್ಯಯನ ಮಾಡಬಹುದು. ಇನ್ನು ವಿಭಿನ್ನ ದೃಷ್ಟಿಕೋನಗಳಲ್ಲಿ ಕುಸುಮಾಕರರ ಕಾದಂಬರಿಗಳನ್ನು ಅಧ್ಯಯನ ಮಾಡುವ ಸಾಧ್ಯತೆಗಳಿವೆ.

ನವ್ಯದ ಕಾದಂಬರಿಕಾರರಾಗಿ ಕುಸುಮಾಕರರು ಅದ್ಭುತವಾದ ಯಶಸ್ಸನ್ನು ಪಡೆಯದಿದ್ದರೂ ಅವರ ಕೆಲವು ಕೃತಿಗಳಾದರೂ ಯಶಸ್ಸು ಪಡೆದಿವೆ ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಇವರ 'ನಾಲ್ಕನೆಯ ಆಯಾಮ' ಮತ್ತು 'ನಿರಿಂದ್ರಿಯ' ಕಾದಂಬರಿಗಳು ನಿಜವಾಗಿಯು ಉತ್ತಮ ಕಾದಂಬರಿಗಳು. 'ಪರಿಘ' ಕಾದಂಬರಿಯು ಯಶಸ್ವಿಯಾಗಲಿಲ್ಲ ಎಂದೇ ಹೇಳಬೇಕು. ಇದರಲ್ಲಿನ ಅರವಿಂದ ಮತ್ತು ಅಜೇಯರ ಪಾತ್ರಗಳು ಕಾದಂಬರಿಯಲ್ಲಿ ಎರಡು ಧ್ರುವಗಳಂತಿವೆ. ಇದನ್ನು ಕುರಿತು ಸಿ.ಎನ್.ರಾಮಚಂದ್ರನ್ ರವರು

> "ಅಮೂರ್ತ ಸ್ವರೂಪದ ಸಾಹಿತ್ಯದಲ್ಲಿ ಪ್ರಾಮಾಣಿಕತೆಯೆಂದರೇನು? ಮತ್ತು ಶ್ರೇಷ್ಠ ಸಾಹಿತ್ಯಕ್ಕೂ ಜನಪ್ರಿಯತೆಗೂ ಇರುವ ಸಂಬಂಧವೇನು? ಇತ್ಯಾದಿ ಪ್ರಶ್ನೆಗಳನ್ನೆತ್ತಿದರೂ, ಅಜೇಯ ಮತ್ತು ಅರವಿಂದ ಪೂರಾ ಕಪ್ಪು ಬಿಳುಪು ಪಾತ್ರಗಳಾದ್ದರಿಂದ ಮತ್ತು ಅಜೇಯನ ವಿಡಂಬನೆ ಕೃತಿ ಮುಂದುವರೆದಂತೆ ಪುನರುಕ್ತಿಯಾಗಿ ನೀರಸವಾಗುವುದರಿಂದ, ಈ ಕೃತಿ ಓದುಗರನ್ನು ಅಷ್ಟಾಗಿ ತಟ್ಟುವುದಿಲ್ಲ."[೧]

ಎಂದು ಅಭಿಪ್ರಾಯಪಡುತ್ತಾರೆ. ಇದರಲ್ಲಿ ಅಜೇಯ ಮತ್ತು ಅರವಿಂದ ಪರಸ್ಪರ ವಿರುದ್ಧ ಪಾತ್ರಗಳಾಗಿವೆ. ಅಜೇಯ ಮಾನಸಿಕ ದೌರ್ಬಲ್ಯವುಳ್ಳ ಋಣಾತ್ಮಕ ಪಾತ್ರವಾದರೆ, ಅರವಿಂದ ಮಾನಸಿಕ ದೃಢತೆಯನ್ನು ಹೊಂದಿರುವ ಧನಾತ್ಮಕ ಪಾತ್ರ. ಆದರೆ ಇಬ್ಬರು ಸಮಾಜದಲ್ಲಿ ಪ್ರತಿಷ್ಠಿತರೇ. ಇದು ಕಾದಂಬರಿಯ ಓದುಗರಿಗೆ ಅಸಹಜವಾಗಿ ಕಾಣುತ್ತದೆ. ಕುಸುಮಾಕರರ ಆರಂಭದ ಕಾದಂಬರಿಯಾದ 'ಮುಗಿಯದ ಕತೆ'ಯು ಸಾಧಾರಣ ಹಂತದಲ್ಲಿಯೇ ನಿಲ್ಲುತ್ತದೆ. ಕಾದಂಬರಿಯ ನಾಯಕ ದೇಶಪಾಂಡೆಯ ಮಾನಸಿಕ ದ್ವಂದ್ವಗಳಿಗೆ, ತೀವ್ರ ಕೀಳರಿಮೆಗೆ ಕಾರಣಗಳು ಕಾದಂಬರಿಯಲ್ಲಿ ದೊರೆಯುವುದಿಲ್ಲ. ಇತ್ತೀಚಿಗೆ ಪ್ರಕಟಗೊಂಡ 'ಬಯಲು-ಬಸಿರು' ಕಾದಂಬರಿಯು ನವ್ಯತೆಯ ಚೌಕಟ್ಟಿನೊಳಗೆ ಸ್ವಲ್ಪ ಹೊಸತನವನ್ನು ಒಳಗೊಂಡ ಕೃತಿ. ಬದುಕಿನ

ಬಗ್ಗೆ ಗಾಢವಾದ ಚಿಂತನೆ, ಆಧ್ಯಾತ್ಮಿಕತೆ ಇಲ್ಲಿ ಪ್ರಾಧಾನ್ಯ ಪಡೆದಿವೆ. ಆಧುನಿಕ ಕಾಲಕ್ಕೆ ಅನ್ವಯವಾಗುವ ದರ್ಶನಗಳು ಮತ್ತು ವೈಚಾರಿಕ ಜಿಜ್ಞಾಸೆಯನ್ನು ಹೊಂದಿರುವ ಇದು ಯಾವ ಮಟ್ಟದ ಯಶಸ್ಸನ್ನು ಪಡೆಯುತ್ತದೆ ಎಂಬುದನ್ನು ಕಾದು ನೋಡಬೇಕು.

ಕನ್ನಡ ಕಾದಂಬರಿಗಳ ಪರಂಪರೆಯಲ್ಲಿ ಕುಸುಮಾಕರರ ಕೃತಿಗಳಿಗೆ ವಿಶಿಷ್ಟ ಸ್ಥಾನವೇನಾದರೂ ಇದೆಯೆ?. ಇದುವರೆಗೆ ಕನ್ನಡ ಕಾದಂಬರಿಗಳ.ಇತಿಹಾಸದಲ್ಲಿ ಶ್ರೇಷ್ಠ ಕಾದಂಬರಿಗಳೆಲ್ಲವೂ ಸಮುದಾಯವನ್ನು ಕುರಿತು ಬಂದವುಗಳೇ ಆಗಿವೆ. 'ಮಲೆಗಳಲ್ಲಿ ಮದುಮಗಳು', 'ಜೋಮನದುಡಿ', 'ಕುಸುಮಬಾಲೆ', 'ಗ್ರಾಮಾಯಣ' ಮುಂತಾದ ಕಾದಂಬರಿಗಳ ಸಾಲಿನಲ್ಲಿ ಕುಸುಮಾಕರರ ಕಾದಂಬರಿಗಳು ನಿಲ್ಲುವುದಿಲ್ಲ. ಏಕೆಂದರೆ ಈ ಮೇಲಿನ ಕಾದಂಬರಿಗಳೆಲ್ಲವೂ ಸ್ಥಳೀಯ ಪರಿಸರವನ್ನು, ಇಲ್ಲಿನ ಸಾಮಾಜಿಕ ಸ್ಥಿತಿಗತಿಗಳನ್ನು, ಸ್ಥಳೀಯ ಸಮುದಾಯದ ದೃಷ್ಟಿಕೋನದಿಂದಲೇ ನೋಡಿವೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಪ್ರತಿಯೊಂದು ಪಾತ್ರಗಳು ತಮ್ಮದೇ ಆದ ಜೀವನ-ದರ್ಶನವನ್ನು ಹೊಂದಿವೆ. ತಮ್ಮದೇ ಆದ ದೃಷ್ಟಿಕೋನದಿಂದ ಸಮಾಜವನ್ನು ನೋಡುತ್ತವೆ. ಆದ್ದರಿಂದಲೇ ಇಲ್ಲಿ ಯಾರು ಪ್ರಾಮುಖ್ಯರಲ್ಲ, ಯಾರು ಸಹ ಅಮುಖ್ಯರಾಗುವುದಿಲ್ಲ. ಆದರೆ ಕುಸುಮಾಕರರ ಕಾದಂಬರಿಗಳು ನಾಯಕ ಕೇಂದ್ರಿತವಾಗಿವೆ. ಶುದ್ಧ ವೈಚಾರಿಕತೆಯ ಹಿನ್ನೆಲೆಯಲ್ಲಿ ರೂಪುಗೊಂಡ ಕೃತಿಗಳಿವು. ಕುವೆಂಪು ಕಾದಂಬರಿಗಳಲ್ಲಿ ಅನುಭವಗಳ ಮಂಡನೆಯು ಪ್ರಧಾನವಾದರೆ, ಕುಸುಮಾಕರರ ಕಾದಂಬರಿಗಳಲ್ಲಿ ಅನುಭವಗಳ ವಿಶ್ಲೇಷಣೆಯಿದೆ, ಅವುಗಳ ಹಿಂದೆ ತಾತ್ವಿಕ ಅನ್ವೇಷಣೆಯಿದೆ. ಈ ಅರ್ಥದಲ್ಲಿ ಇವರ ಕಾದಂಬರಿಗಳು ಭಿನ್ನ ಸ್ವರೂಪವನ್ನು ಪಡೆದುಕೊಳ್ಳುತ್ತವೆ. ಆದ್ದರಿಂದ ನವ್ಯದ ಬರಹಗಾರರಾದ ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರೊಡನೆ ಇವರನ್ನು ಹೋಲಿಸಿ ನೋಡಬಹುದು.

ಕುಸುಮಾಕರರ ಮತ್ತು ತೇಜಸ್ವಿ ಇಬ್ಬರೂ ಆರಂಭದಲ್ಲಿ ವ್ಯಕ್ತಿ ಕೇಂದ್ರಿತ ನಿಲುವಿನಲ್ಲಿಯೇ ಬರಹವನ್ನು ಆರಂಭಿಸಿದರು. ತೇಜಸ್ವಿಯವರು 'ಸ್ವರೂಪ'ದಿಂದ 'ಕರ್ವಾಲೊ' ಕಾದಂಬರಿಗೆ ಬರುವ ಹೊತ್ತಿಗೆ ವ್ಯಕ್ತಿ ಕೇಂದ್ರಿತ ದರ್ಶನದ ಜೊತೆಗೆ ಪ್ರಕೃತಿಯನ್ನು ಒಳಗೊಂಡಿತ್ತು. ಆದರೆ 'ಚಿದಂಬರ ರಹಸ್ಯ'ದಲ್ಲಿ ಅವರ ದರ್ಶನವು ಇಡೀ ಮನುಕುಲದ ಕಡೆಗೆ ಹೊರಳಿತು. ಕುಸುಮಾಕರರ ದರ್ಶನವು 'ಮುಗಿಯದ ಕತೆ'ಯಿಂದ 'ಪರಿಘ'ದವರೆಗೂ 'ವ್ಯಕ್ತಿಕೇಂದ್ರಿತದರ್ಶನ'ವೇ ಆಗಿದ್ದು, ಇತ್ತೀಚಿನ 'ಬಯಲು-ಬಸಿರು' ಕಾದಂಬರಿಯಲ್ಲಿ ಜೀವಕೇಂದ್ರಿತ ದರ್ಶನದ ಕಡೆಗೆ ಹೊರಳಿದೆ. ಮಾನವ ಸಮುದಾಯಕೇಂದ್ರಿತ ದರ್ಶನದೆಡೆಗೆ ಇವರ ಕೃತಿಗಳು ಹೊರಳಲಿಲ್ಲ ನಿಜ.

ಆದರೂ, ಸೀಮಿತವಾದ ಜೀವನ ಸಂದರ್ಭಗಳನ್ನು, ಪಾತ್ರಗಳನ್ನು ಆರಿಸಿಕೊಂಡು, ಅವುಗಳನ್ನು ಆಳವಾದ ಸೂಕ್ಷ್ಮವಾದ ವಿಶ್ಲೇಷಣೆಗೆ ಒಳಪಡಿಸುವ ಜಿಜ್ಞಾಸೆಯ ವಿಧಾನದಲ್ಲಿ, ಅವರಷ್ಟು ಯಶಸ್ಸನ್ನು ಪಡೆದ ಕಾದಂಬರಿಕಾರರು ಮತ್ತೊಬ್ಬರಿಲ್ಲ. ಆಧುನಿಕ ಕನ್ನಡ ಕಾದಂಬರಿ ಪರಂಪರೆಯ ಬಗ್ಗೆ ಚರ್ಚಿಸುವಾಗ ಕುಸುಮಾಕರರ 'ನಾಲ್ಕನೆಯ ಆಯಾಮ' ಮತ್ತು 'ನಿರಿಂದ್ರಿಯ'ಗಳನ್ನು ಚರ್ಚಿಸುವುದನ್ನು ಮರೆಯುವಂತಿಲ್ಲ.

**ಟಿಪ್ಪಣಿ**

೧. ಸಿ.ಎಸ್ .ರಾಮಚಂದ್ರನ್, ಕುಸುಮಾಕರರ ದೇವರಗೆಣ್ಣೂರರ ಸಾಹಿತ್ಯ-ಒಂದು ಸಮೀಕ್ಷೆ, ಪು.೧೨೭.

# ಗ್ರಂಥ ಸೂಚಿ


**ಪ್ರಾಥಮಿಕ ಆಕರಗಳು**

೧. ದೇವರಗೆಣ್ಣೂರು ಕುಸುಮಾಕರ, ೧೯೬೫, **'ಮುಗಿಯದ ಕತೆ'**, ದಿವಾಣಜಿ ಪ್ರಕಾಶನ, ಸೊಲ್ಲಾಪುರ.

೨. ಅದೇ, ೧೯೬೬, **'ನಾಲ್ಕನೆಯ ಆಯಾಮ'**, ದಿವಾಣಜಿ ಪ್ರಕಾಶನ, ಸೊಲ್ಲಾಪುರ.

೩. ಅದೇ, ೧೯೯೩, **'ನಿರಿಂದ್ರಿಯ'**, ದಿವಾಣಜಿ ಪ್ರಕಾಶನ, ಡೊಂಬಿವಿಲಿ.

೪. ಅದೇ, ೧೯೯೫, **'ಪರಿಘು'**, ದಿವಾಣಜಿ ಪ್ರಕಾಶನ, ಡೊಂಬಿವಿಲಿ.

೫. ಅದೇ, ೨೦೦೪, **'ಬಯಲು-ಬಸಿರು'**, ದಿವಾಣಜಿ ಪ್ರಕಾಶನ, ಡೊಂಬಿವಿಲಿ.

**ಪರಾಮರ್ಶನ ಗ್ರಂಥಗಳು**

೧. ಅನಂತಮೂರ್ತಿ.ಯು.ಆರ್, ೧೯೭೧, 'ಹದಿನೈದು ವರ್ಷಗಳ ನವ್ಯ ಗದ್ಯ ಸಾಹಿತ್ಯ', **ಪ್ರಜ್ಞೆ ಮತ್ತು ಪರಿಸರ**, ಅಕ್ಷರ ಪ್ರಕಾಶನ, ಹೆಗ್ಗೋಡು.

೨. ಅದೇ, ೧೯೯೦, 'ಪಾಶ್ಚಾತ್ಯ ಸಾಹಿತ್ಯ ಪ್ರಭಾವ', **ಪೂರ್ವಾಪರ**, ಅಕ್ಷರ ಪ್ರಕಾಶನ, ಹೆಗ್ಗೋಡು.

೩. ಚನ್ನಯ್ಯ.ಎಚ್.ಎಂ, ೧೯೯೦, 'ಕನ್ನಡ ನವ್ಯಚಳುವಳಿ', ಸಂ.ಜಿ.ಎಸ್.ಶಿವರುದ್ರಪ್ಪ, **ಕನ್ನಡ ಸಾಹಿತ್ಯ ಸಂದರ್ಭ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪. ತರೀಕೆರೆ, ರಹಮತ್, ೨೦೦೫, 'ಜಾಗತೀಕರಣಕ್ಕೆ ಪ್ರತಿಕ್ರಿಯೆಯಾಗಿ'?, **ಮಯೂರ**, ಸಂ.೩೬, ಸಂ. ೦೪.

೫. ದೇವ ರಾಮಚಂದ್ರ, ೧೯೯೪, 'ಆಧುನಿಕತೆ ಮತ್ತು ಸಾಹಿತ್ಯ', **ಮುಚ್ಚು ಮತ್ತು ಇತರ ಲೇಖನಗಳು**, ಗ್ರಂಥಾವಳಿ, ಬೆಂಗಳೂರು.

೬. ದೇಸಾಯಿ, ಶಾಂತಿನಾಥ, ೧೯೯೦, 'ಕುಸುಮಾಕರರ ನಾಲ್ಕನೆಯ ಅಯಾಮ', **ನವ್ಯ ಸಾಹಿತ್ಯ ದರ್ಶನ** ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ.

೭. ನಾಗಭೂಷಣ ಸ್ವಾಮಿ ಓ.ಎಲ್., ೧೯೮೯, 'ಕನ್ನಡ ಕಾದಂಬರಿಗಳಲ್ಲಿ ಪ್ರಜ್ಞಾ ಪ್ರವಾಪ', **ಪ್ರಜ್ಞಾ ಪ್ರವಾಹತಂತ್ರ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೮. ಬಾಲಸುಬ್ರಹ್ಮಣ್ಯ ನರಹಳ್ಳಿ, ೧೯೯೦, **ನವ್ಯತೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೯. ರಾಮಚಂದ್ರನ್ ಸಿ.ಎನ್., ೨೦೦೨, 'ಕುಸುಮಾಕರರ ದೇವರಗೆಣ್ಣೂರರ ಸಾಹಿತ್ಯ : ಒಂದು ಸಮೀಕ್ಷೆ', ಗುರುಲಿಂಗಕಾಪಸೆ(ಸಂ), **ಗೌರವ ಪ್ರಶಸ್ತಿ ಪುರಸ್ಕೃತರ ಸಾಹಿತ್ಯ ಸಾಧನೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

